ವಿಶಿಷ್ಟ ಪಂಥಗಳನ್ನೊಳಗೊಂಡ ಶೈವಮತದ ಸ್ಥಾನಮಾನವನ್ನು ಈ ಕಾಲದಲ್ಲಿ ಅಭಿನವ ಶೈವಮತವೆಂದು ಕೆಲವೊಮ್ಮೆ ವರ್ಣಿತವಾಗಿರುವ ವೀರಶೈವಮತವು ಪಡೆದುಕೊಂಡಿತ್ತು ಏಕಾಂತದ ರಾಮಯ್ಯ, ವಿರುಪರಸ, ಗೊಗ್ಗಿದೇವ ಮುಂತಾದ ಇತರ ಶೈವ ಮತಾನುಯಾಯಿಗಳು ಜೈನಮತದ ಆಕ್ರಮಣಗಳಿಂದ ಅದನ್ನು ರಕ್ಷಿಸಲು ಯತ್ನಿಸಿದರು ಈ ಹೊಸಮತದ ಮಹತ್ತ್ವವನ್ನು ಎತ್ತಿಹಿಡಿಯಲು ಯತ್ನಿಸಿದವರಲ್ಲಿ ಬಸವೇಶ್ವರ ಕೊನೆಯ ಮಹಾನ್ ವ್ಯಕ್ತಿ ಈ ಮಹಾಪುರುಷರು ಸಾಮಾಜಿಕ-ಧಾರ್ಮಿಕ ಸುಧಾರಣೆಯೊಂದನ್ನು ಆಚರಣೆಗೆ ತರಲು ತೊಡಗಿದಾಗ, ಜೈನರು ಸ್ವಾಭಾವಿಕವಾಗಿ ತಮ್ಮ ಹಿತಾರ್ಥಗಳನ್ನು ರಕ್ಷಿಸಿಕೊಳ್ಳಬೇಕಾಯಿತು ಪ್ರತಿಯೊಂದು ಪಂಥದ ಅನುಯಾಯಿಗಳೂ ತಮ್ಮ ತತ್ತ್ವಪ್ರಸಾರಕ್ಕಾಗಿ ಹಲವು ಸಾಧನಗಳನ್ನು ಅಳವಡಿಸಿಕೊಳ್ಳುತ್ತಿದ್ದುದಕ್ಕೆ ಸ್ಪಷ್ಟ ಆಧಾರಗಳು ಈ ಕಾಲದ ಶೈವ ಮತ್ತು ಜೈನ ಶಾಸನಗಳೆರಡರಲ್ಲೂ ನಮಗೆ ದೊರೆಯುತ್ತವೆ ಅನ್ಯಧರ್ಮಾನುಯಾಯಿಗಳನ್ನು ವಾದಗಳಲ್ಲಿ ಸೋಲಿಸಿ ಪಲಾಯನಮಾಡುವಂತೆ ಮಾಡಿದ ಜೈನಯತಿಗಳು ಆ ಇತರರಿಗಿಂತ ಬಹಳ ಉತ್ಕೃಷ್ಟರೆಂದು ತೋರಿಸುವ ಈ ಕಾಲದ ಪ್ರವೃತ್ತಿಯನ್ನು ಮೇಲೆ ಉಲ್ಲೇಖಿಸಿದ ಶಾಸನಗಳಲ್ಲಿ ಗಮನಿಸಬಹುದು ಜೈನರು ತಮ್ಮ ಹಿಂದಿನ ಸ್ಥಾನಮಾನವನ್ನು ಮತ್ತೆ ಪಡೆಯಲು ಮಾಡಿದ ಪ್ರಯತ್ನಗಳನ್ನು ನಾವಿಲ್ಲಿ ನೋಡಬಹುದು [1]

ಈ ಹಿನ್ನೆಲೆಯಲ್ಲಿ ಕ್ರಿ ಶ ೧೩೬೮ಕ್ಕೆ ಸೇರುವ ಬುಕ್ಕರಾಯನ (I) ಶಾಸನವನ್ನು (ನಂ ೪೭೫) ನಾವು ಪರೀಕ್ಷಿಸಬೇಕಾಗುತ್ತದೆ ಭವ್ಯರೆಂದು ಉಲ್ಲೇಖಿತರಾಗಿರುವ ಜೈನರು ಹಾಗೂ ಭಕ್ತರೆಂದು ಕರೆಯಲಾಗಿರುವ ಶ್ರೀ ವೈಷ್ಣವರ ನಡುವೆ ವೈಷಮ್ಯ ತಲೆದೋರಿದಾಗ, ಜೈನರು ಶ್ರೀವೈಷ್ಣವರಿಂದ ತಮಗುಂಟಾಗುತ್ತಿದ್ದ ಅನ್ಯಾಯಗಳ ಬಗೆಗೆ ಅರಸನಿಗೆ ದೂರಿತ್ತರು ಜೈನ ಮತ್ತು ವೈಷ್ಣವಮತಗಳ ನಡುವೆ ಯಾವ ಭೇದವೂ ಇಲ್ಲ ಮತ್ತು ಅವೆರಡನ್ನು ಬೇರೆ ಬೇರೆಯೆಂದು ಪರಿಗಣಿಸಕೂಡದು ಎಂದು ತಿಳಿಸಿ ಅರಸನು ಅವರಿಬ್ಬರ ನಡುವೆ ಶಾಂತಿಯನ್ನೇರ್ಪಡಿಸಿದನು ಶ್ರೀವೈಷ್ಣವರಲ್ಲಿ ಪ್ರಮುಖನಾದ ತಿರುಮಲೆ ತಾತಯ್ಯನು ಭವ್ಯರ ಅನುಮತಿಯೊಂದಿಗೆ ಬೆಳಗೊಳತೀರ್ಥದ ವೈಷ್ಣವರಿಗೆ ಅಂಗರಕ್ಷೆಯನ್ನೊದಗಿಸಲು ರಾಜ್ಯದಲ್ಲಿ ಪ್ರತಿ ಜೈನದ್ವಾರ (ಮನೆ?) ದಿಂದಲೂ ಒಂದು ಹಣವನ್ನು ಸಂಗ್ರಹಿಸಿ ದೇವರಿಗೆ ೨೦ ಅಂಗರಕ್ಷೆಯನ್ನಿತ್ತನಂತರ ಉಳಿದ ಮೊತ್ತದಿಂದ ಪಾಳುಬಿದ್ದ ಜಿನಾಲಯಗಳ ಜೀರ್ಣೋದ್ಧಾರ ಮಾಡಿಸಬೇಕೆಂದು ನಿರ್ಣಯಿಸಲಾಯಿತು ಜೈನರು ಪ್ರಾಯಶಃ ಹೆಚ್ಚಿನ ಸೌಲಭ್ಯಗಳನ್ನು ಪಡೆಯಲು ಯತ್ನಿಸಿದರಾದರೂ ಅವರಿಗೆ ಸಲ್ಲಬೇಕಾದುದನ್ನಷ್ಟನ್ನೇ ಪಡೆದರು ಹಾಗೂ ಅರಸನು ಧಾರ್ಮಿಕ ಸಹಿಷ್ಣುತೆಯ ನೀತಿಯನ್ನು ಮೆರೆಸುವ ಅವಕಾಶವನ್ನುಪಯೋಗಿಸಿಕೊಂಡನೆಂದು ಇದರಿಂದ ವಿದಿತವಾಗುತ್ತದೆ

ಪ್ರಸ್ತುತ ಸಂಪುಟದಲ್ಲಿರುವ ಶಾಸನಗಳಿಂದ ಜೈನಗುರುಗಳಲ್ಲಿ ಅನೇಕರು ಮಹಾ ಗ್ರಂಥಗಳನ್ನು ರಚಿಸಿದರೆಂದು ನಮಗೆ ತಿಳಿದುಬರುತ್ತದೆ ಕೊಂಡಕುಂದನೆನಿಸಿದ ಉಮಾಸ್ವಾತಿಯು 'ತತ್ತ್ವಾರ್ಥಸೂತ್ರ'ದ ಕರ್ತೃವೆಂಬುದನ್ನು ಹಿಂದೆ ನೋಡಿದ್ದೇವೆ ಈ ಕೃತಿಗೆ ಶಿವಕೋಟಿಸೂರಿ ಎಂಬಾತನು ಟೀಕೆಯನ್ನು ರಚಿಸಿದನೆಂದು ಶಾಸನವೊಂದು (ನಂ ೩೬೦) ತಿಳಿಸುತ್ತದೆ ಕ್ರಿ ಶ ೧೧೨೯ನೆಯ ೬೭ನೆಯ ಶಾಸನವು ಜೈನಯತಿಗಳ ಅನೇಕ ಕೃತಿಗಳನ್ನು ಹೆಸರಿಸುತ್ತದೆ ವಜ್ರನಂದಿಮುನಿಯು 'ನವಸ್ತೋತ್ರ'ವನ್ನು, ಸುಮತಿದೇವನು 'ಸುಮತಿಶತಕ'ವನ್ನು, ಚಿಂತಾಮಣಿಯು ಎಲ್ಲ ಮನೆಗಳಲ್ಲೂ ದೈನಂದಿನ ಉಪಯೋಗಕ್ಕಾಗಿ 'ಚಿಂತಾಮಣಿ' ಎಂಬ ಗ್ರಂಥವನ್ನು, ಶ್ರೀವರ್ಧದೇವನು 'ಚೂಳಾಮಣಿ'ಯನ್ನು, ಚಂದ್ರಕೀರ್ತಿಗಣಿಯು 'ಶ್ರುತಬಿಂದು' ವನ್ನು, ದಯಾಪಾಲನು 'ರೂಪಸಿದ್ಧಿ'ಯನ್ನೂ ರಚಿಸಿದರೆಂದು ಹೇಳಲಾಗಿದೆ ದೇವನಂದಿ ಮತ್ತು ಜಿನೇಂದ್ರಬುದ್ಧಿ ಎಂಬ ಹೆಸರುಗಳಿಂದಲೂ ಪರಿಚಿತನಾಗಿದ್ದ ಪೂಜ್ಯಪಾದನು 'ಸರ್ವಾರ್ಥಸಿದ್ಧಿ' 'ಜೈನಾಭಿಷೇಕ' ಮತ್ತು 'ಸಮಾಧಿಶತಕ' ಮುಂತಾದ ಕೃತಿಗಳನ್ನಲ್ಲದೆ 'ಜೈನೇಂದ್ರ' ಎಂಬ ವ್ಯಾಕರಣಗ್ರಂಥವನ್ನೂ ರಚಿಸಿದ್ದನೆಂದು ತಿಳಿದುಬರುತ್ತದೆ (ಕ್ರಿ ಶ ೧೧೬೩ರ ೬೪ನೆಯ ಶಾಸನ) ಮುಂದಿನಿಂದ ಹಿಂದಕ್ಕೂ, ಹಿಂದಿನಿಂದ ಮುಂದಕ್ಕೂ ಓದಲು ಸಾಧ್ಯವಾಗುವ ರೀತಿಯಲ್ಲಿ ಶ್ರುತಕೀರ್ತಿತ್ರೈವಿದ್ಯನು 'ರಾಘವಪಾಂಡವೀಯ' ಎಂಬ ಕೃತಿಯನ್ನು ರಚಿಸಿದನೆಂದು ಇದೇ ಶಾಸನ ತಿಳಿಸುತ್ತದೆ ಶ್ರೀಪಾಲತ್ರೈವಿದ್ಯದೇವನು 'ವಿಜಯವಿಳಾಸದ' ಕರ್ತೃವಾಗಿದ್ದನೆನ್ನಲಾಗಿದೆ (ನಂ ೫೪೯) ಕ್ರಿ ಶ ೧೩೯೮ರ ೩೬೪ನೆಯ ಶಾಸನವು ಚಾರುಕೀರ್ತಿಮುನಿಯ 'ಸಾರತ್ರಯ'ವನ್ನು ಮತ್ತು ಸಿದ್ಧಾಂತಯೋಗಿಯ 'ಸಿದ್ಧಶಾಸ್ತ್ರ'ವನ್ನು ಉಲ್ಲೇಖಿಸುತ್ತದೆ

ಜೈನಗುರುಗಳಲ್ಲಿ ಕೆಲವರು ಪವಾಡಗಳನ್ನು ಮಾಡಿ ತೋರಿಸಿದರು ಕೊಂಡಕುಂದಾಚಾರ್ಯನು ಗಾಳಿಯಲ್ಲಿ ಸಂಚರಿಸುವ ಸಿದ್ಧಿಯನ್ನು ಪಡೆದಿದ್ದನೆಂದು ಹೇಳಿದೆ ಅವನು ಬಾಹ್ಯ ಮತ್ತು ಆಂತರಿಕ ಕಲ್ಮಶಗಳಿಂದ ವಿಮುಕ್ತನಾಗಿದ್ದನೆಂಬುದನ್ನು ತೋರಿಸಲು ಭೂಮಿಯಿಂದ ಕೇವಲ ನಾಲ್ಕು ಅಂಗುಲಗಳಷ್ಟು ಮೇಲೇರಿ ನಡೆಯುತ್ತಿದ್ದ ಜೀವಿಗಳ ಸಂರಕ್ಷಣೆಯ ಉದ್ದೇಶವುಳ್ಳವನಾಗಿ ಆ ಜೈನಯತಿಯು ಗೃಧ್ರದ ಪಕ್ಷಗಳನ್ನು ಧರಿಸಿದುದರಿಂದ ಗೃಧ್ರಪಿಂಛನೆಂಬ ಹೆಸರಿನಿಂದ ಕರೆಯಲ್ಪಟ್ಟನು (ಶಾಸನ ೩೬೪) ಪೂಜ್ಯಪಾದನನ್ನು ಉಲ್ಲೇಖಿಸುತ್ತ ಇದೇ ಶಾಸನವು ಅವನ "ಪಾದಗಳನ್ನು ತೊಳೆದ ನೀರು ಸ್ಪರ್ಶಮಾತ್ರ

[1] ವಿವರಗಳಿಗೆ ಡಾ ಪಿ ಬಿ ದೇಸಾಯರ *Basavēsvara and his times* ಎಂಬ ಗ್ರಂಥದ ಎರಡನೆಯ ಭಾಗ, ಹತ್ತನೆಯ ಅಧ್ಯಾಯ ಮುಂತಾದವುಗಳನ್ನು ನೋಡಬಹುದು

ದಿಂದಲೇ ಕಬ್ಬಿಣವನ್ನು ಬಂಗಾರವನ್ನಾಗಿ ಬದಲಾಯಿಸುವ ಶಕ್ತಿಯನ್ನು ಹೊಂದಿತ್ತು'' ಎಂದು ತಿಳಿಸುತ್ತದೆ ''ರಹಸ್ಯವಾಗಿ ಕಲಿಯು ಕಳುಹಿಸಿದ'' ರೋಗವೊಂದು ಶ್ರುತಮುನಿ ಮಹಾಯೋಗಿಯ ಶಕ್ತಿಯನ್ನು ಕ್ರಮೇಣ ಕುಗ್ಗಿಸಿತು ಈ ರೋಗದಿಂದ ತಾನು ಪಾರಾಗಲಾರೆನೆಂಬುದನ್ನು ಮನಗಂಡ ಆ ಮುನಿಯು ತನ್ನ ಸೋದರ ಶಿಷ್ಯನಾದ ಪಂಡಿತೇಂದ್ರ ಯೋಗಿರಾಜನಿಂದ ಸಲ್ಲೇಖನವನ್ನು ಸ್ವೀಕರಿಸಿ ಕ್ರಿ ಶ ೧೪೩೨, ಜುಲೈ ೭ರಂದು ಮೃತನಾದನು ಈ ಶಾಸನವು (ನಂ ೩೬೪) ಆವನ ನೆನಪಿಗಾಗಿ ಸ್ಥಾಪಿಸಿದ ನಿಶಿಧಿ ಕ್ರಿ ಶ ೧೧೧೯ನೆಯ ವರ್ಷದ ೪೮೪ನೆಯ ಶಾಸನವು ದಿನಾಕರನಂದಿಯ ಶಿಷ್ಯನಾದ ಮಲಧಾರಿದೇವನು ಸಾಧಿಸಿದ ಮನಸ್ಸಿನ ಪರಿಪೂರ್ಣತೆಯನ್ನು ಶ್ಲಾಘಿಸುತ್ತದೆ

ನೆಱೆಯೆ ತನುತ್ರಮಿಕ್ಕಿದವೊಲಿರ್ದ್ದ ಮಲಂ ತಿನೆ ಮೆಯ್ಯನೊರ್ಮ್ಮೆಯುಂ
ತಱಿಸುವುದಿಲ್ಲ ನಿದ್ದೆವರೆ ಮಗ್ಗುಲನಿಕ್ಕುವುದಿಲ್ಲ ಬಾಗಿಲಂ
ಕಿಱಿತೆಱೆಯೆಂಬುದಿಲ್ಲುಗುಳ್ವುದಿಲ್ಲ ಮಲಂಗುವುದಿಲ್ಲಹೀಂದ್ರನುಂ
ನೆಱೆವನೆ ಬಣ್ಣಿಸಲ್ಗುಣಗಣಾವಳಿಯಂ ಮಳಧಾರಿದೇವರಂ

ಎನ್ನುತ್ತದೆ ಶಾಸನ ಕ್ರಿ ಶ ೧೧೨೩ರ ೧೩೫ನೆಯ ಶಾಸನದಲ್ಲಿ ಅವನಿಗೆ ಗಂಡವಿಮುಕ್ತದೇವನೆಂಬ ಹೆಸರನ್ನು ನೀಡಲಾಗಿದ್ದು, ಕುಕ್ಕುಟಾಸನ ಎಂದು ಪರಿಚಿತವಾಗಿರುವ ಆಸನದಿಂದ ಅವನು ಎಂದೂ ಬಳಲಿರಲಿಲ್ಲವಾದುದರಿಂದ ಕುಕ್ಕುಟಾಸನಮಲಧಾರಿ ಎಂಬ ಹೆಸರೂ ಅವನಿಗೆ ಬಂದಿತೆಂದೂ ತಿಳಿಸಲಾಗಿದೆ

ಕುಲಚಂದ್ರದೇವರ ಶಿಷ್ಯನಾದ ಮಾಘನಂದಿಯನ್ನು ಕೊಲ್ಲಾಪುರತೀರ್ಥದ ಸಂಸ್ಥಾಪಕನೆಂಬುದಾಗಿ ೭೧ನೆಯ ಶಾಸನವು ಉಲ್ಲೇಖಿಸುತ್ತದೆ ಈ ವಿಷಯವನ್ನು ಕ್ರಿ ಶ ೧೧೨೫ಕ್ಕೆ ಸೇರಿದ ಚಾಲುಕ್ಯ ವಿಕ್ರಮಾದಿತ್ಯನ ತೇರದಾಳ ಶಾಸನವು ಸಮರ್ಥಿಸುತ್ತದೆ ಈ ಶಾಸನವು ತೇರದಾಳಿನ ಪ್ರಮುಖನಾದ ಮಾಂಡಲಿಕ ಗೊಂಕದೇವನು ಅಲ್ಲಿ ತನ್ನ ಹೆಸರಿನಲ್ಲಿ ಜಿನಾಲಯವೊಂದನ್ನು ಕಟ್ಟಿಸಿದ ವಿಷಯವನ್ನು ನಿರೂಪಿಸುತ್ತದೆ ಈ ಜಿನಾಲಯದ ನಿರ್ಮಾಣ ಪೂರ್ಣಗೊಂಡ ನಂತರ ಅಲ್ಲಿ ಮೂರ್ತಿ ಪ್ರತಿಷ್ಠಾಪನೆಯ ಶುಭಸಂದರ್ಭದಲ್ಲಿ ಭಾಗವಹಿಸಿ ಅದನ್ನು ಯಶಸ್ವಿಗೊಳಿಸಲು ಆವನು ಕೊಲ್ಲಗಿರಿ (ಕೊಲ್ಲಾಪುರ)ಯಿಂದ ದೇಶಿಗಣ, ಪುಸ್ತಕ ಗಚ್ಛ ಮತ್ತು ಕೊಂಡಕುಂದಾನ್ವಯಕ್ಕೆ ಸೇರಿದ ಮಾಘನಂದಿಸಿದ್ಧಾಂತಿಕನನ್ನು ಆಹ್ವಾನಿಸಿದನು ಈ ಮಾಘನಂದಿಯು ನಾಮಂತ ನಿಂಬದೇವನ ಗುರುವಾಗಿದ್ದನೆಂದು ಈ ಶಾಸನವಲ್ಲಿ ಹೇಳಲಾಗಿದ್ದು, ಇದೇ ರೀತಿಯಲ್ಲಿ ಶ್ರವಣಬೆಳಗೊಳದ ಶಾಸನವೊಂದರಲ್ಲೂ ನಿಂಬದೇವನು ಮಾಘನಂದಿಯ ಶಿಷ್ಯನಾಗಿದ್ದನೆಂದು ಹೇಳಿದೆ ಈ ಶಾಸನದ ಅನಂತರದ ಭಾಗ ಕ್ರಿ ಶ ೧೧೮೧ಕ್ಕೆ ಸೇರಿದುದಾಗಿದ್ದು, ನಾಮಂತ ನಿಂಬದೇವನು ಕೊಲ್ಲಾಪುರದ ರೂಪನಾರಾಯಣ ಬಸದಿಯನ್ನು ಮಾಡಿಸಿದನೆಂದು ತಿಳಿಸುತ್ತದೆ[1] ಪ್ರಸ್ತುತ ನಾವು ಪರಿಶೀಲಿಸುತ್ತಿರುವ ಶ್ರವಣಬೆಳಗೊಳದ ಶಾಸನವು ಸಾಮಂತ ನಾಕರಸ ಮತ್ತು ಸಾಮಂತ ಕಾಮದೇವ ಎಂಬ ಮಾಘನಂದಿಯ ಇನ್ನಿಬ್ಬರು ಶಿಷ್ಯರನ್ನು ಸಹ ಉಲ್ಲೇಖಿಸುತ್ತದೆ ಆದ್ದರಿಂದ ಮಾಘನಂದಿಯ ಕಾಲ ಕ್ರಿ ಶ ೧೨ನೆಯ ಶತಮಾನದ ಮೊದಲ ದಶಕವೆಂದು ಹೇಳಬಹುದು ಗಂಡವಿಮುಕ್ತದೇವ ಮತ್ತು ಮೇಲೆ ಗಮನಿಸಿದ 'ರಾಘವಪಾಂಡವೀಯ'ದ ಕರ್ತೃವಾದ ಶ್ರುತಕೀರ್ತಿಯು ಮಾಘನಂದಿಯ ಶಿಷ್ಯರಾಗಿದ್ದರು ಶ್ರುತಕೀರ್ತಿಯು ಮಾಘನಂದಿಯ ಶಿಷ್ಯನಾಗಿ ತೇರದಾಳದ ಶಾಸನದಲ್ಲಿ ಸಹ ಕಂಡುಬರುತ್ತಾನೆ ಆದ್ದರಿಂದ ಶ್ರುತಕೀರ್ತಿಯ ಕಾಲ ೧೨ನೆಯ ಶತಮಾನದ ಮಧ್ಯಭಾಗವೆಂದು ಹೇಳಬಹುದು ಕೆಲ್ಲಂಗೆರೆಯ ಪ್ರತಾಪಪುರವನ್ನು ಪುನರೂರ್ಜಿತಗೊಳಿಸಿ ಕೊಲ್ಲಾಪುರದ ರೂಪನಾರಾಯಣ ಬಸದಿಗೆ ದಾನನೀಡಲಾಯಿತು ಜಿನನಾಥ ಪುರದಲ್ಲಿ ನಿರ್ಮಿಸಲಾದ ಕಲ್ಲಬಸದಿಯನ್ನು ಸಹ ಪ್ರಾಯಶಃ ರೂಪನಾರಾಯಣಬಸದಿಗೆ ಪ್ರತಿಬದ್ಧವಾಗಿ ಮಾಡಲಾಯಿತೆಂದು ತೋರುತ್ತದೆ ಕೊಲ್ಲಾಪುರದಲ್ಲಿಯೇ ಇರುವ ಕ್ರಿ ಶ ೧೧೩೫ಕ್ಕೆ ಸೇರಿದ ಶಾಸನವೊಂದು[2] ಮಾಘನಂದಿಯನ್ನು ಉಲ್ಲೇಖಿಸಿ ಈ ಮೊದಲು ರೂಪನಾರಾಯಣ ಬಸದಿಯನ್ನು ನಿರ್ಮಿಸಿದ ಮಹಾಸಾಮಂತ ನಿಂಬದೇವನಿಂದಲೇ ನಿರ್ಮಿತವಾದ ಪಾರ್ಶ್ವನಾಥ ಬಸದಿಯ ನಿರ್ವಹಣೆಯನ್ನು ಮಾಘನಂದಿಯ ಶಿಷ್ಯನಾದ ಶ್ರುತಕೀರ್ತಿತ್ರೈವಿದ್ಯನಿಗೆ ವಹಿಸಿದ ವಿಷಯವನ್ನು ನಿರೂಪಿಸುತ್ತದೆ ಈ ನಿಂಬದೇವನು ರೂಪನಾರಾಯಣನೆಂಬ ಬಿರುದನ್ನು ಧರಿಸಿದ ಶಿಲಾಹಾರ ಮನೆತನಕ್ಕೆ ಸೇರಿದ ಗಂಡರಾದಿತ್ಯನ ಕೈಕೆಳಗಿನ ಅಧಿಕಾರಿಯಾಗಿದ್ದನು

೧೫೭ನೆಯ ಶಾಸನವು ಸೂತ್ನಚಂದಿಲ ಮನೆತನಕ್ಕೆ ಸೇರಿದ ಗೊಲ್ಲದೇಶದ ಅರಸನೊಬ್ಬ ಸನ್ಯಾಸವನ್ನು ಸ್ವೀಕರಿಸಿ ಗೊಲ್ಲಾಚಾರ್ಯನೆಂದು ನಾಮಾಂಕಿತನಾದ ವಿಷಯವನ್ನು ತಿಳಿಸುತ್ತದೆ ಇವನನ್ನು ಗುರುತಿಸಲು ಸಾಧ್ಯವಿಲ್ಲವಾಗಿದೆ ಹಾಗೆಯೇ ೭೩ನೆಯ ಶಾಸನದಲ್ಲಿ ಹೇಳಿರುವ ನಯಕೀರ್ತಿಯ ಶಿಷ್ಯನಾದ ಇರುಂಗೋಳನನ್ನೂ ಗುರುತಿಸಲು ಸಾಧ್ಯವಾಗುವುದಿಲ್ಲ ಒಬ್ಬ

[1] B R Gopal *Karnatak Insci iptions,* Vol V, Nos 21 and 98, Introduction, pp xxxiv–xxxv
[2] *Ep Ind ,* Vol XIX, pp 30 ff

ಇಮ್ಮಡಿ ಇರುಂಗೋಳಚೋಳನು ನಿಡುಗಲ್ಲಿನ ಚೋಳರ ಮಾಂಡಲಿಕ ಮನೆತನಕ್ಕೆ ಸೇರಿದವನಾಗಿದ್ದು, ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ಹೆಂಜೇರುವಿನ ಸುತ್ತಮುತ್ತಲ ಪ್ರದೇಶವನ್ನಾಳುತ್ತಿದ್ದನು[1] ಈತನು ಹೊಯ್ಸಳ ವಿಷ್ಣುವರ್ಧನನಿಂದ ಪರಾಜಿತನಾದನೆಂದು ಹೇಳಿದೆ ಒಂದನೆಯ ರಾಚಮಲ್ಲನ ಮಗನಾದ ಇನ್ನೊಬ್ಬ ಇರುಂಗೋಳನು ಸಹ ನಮಗೆ ಪರಿಚಿತನಾಗಿದ್ದಾನೆ[2] ಆದರೆ, ನಮ್ಮ ಶಾಸನದಲ್ಲಿ ಉಕ್ತನಾದ ಇರುಂಗೋಳನನ್ನು ಗುರುತಿಸಲು ಸಾಧ್ಯವಿಲ್ಲವಾಗಿದೆ

ಇದೇ ಶಾಸನವು ಅಣ್ಣಿತಟಾಕದ ನಿವಾಸಿಯಾದ ಮಲಧಾರಿಸ್ವಾಮಿ ಎಂಬ ಇನ್ನೊಬ್ಬ ಜೈನಯತಿಯನ್ನೂ ಉಲ್ಲೇಖಿಸುತ್ತದೆ ಈ ಅಣ್ಣಿತಟಾಕವು ಗಂಗಪೆರ್ಮಾಡಿ ಇಮ್ಮಡಿ ಬೂತುಗನು ತನ್ನ ಹೆಸರಿನಲ್ಲಿ ಪೆರ್ಮಾಡಿ ಜಿನಾಲಯವೆಂದು[3] ಕಟ್ಟಿಸಿರುವ ಪ್ರಸಿದ್ಧ ಜೈನ ಬಸದಿ ಇರುವ ಅಣ್ಣಿಗೆರೆಯೆ ಆಗಿದೆ ಮಲಧಾರಿ ಸ್ವಾಮಿಯು ಈ ಸ್ಥಳದ ಪೆರ್ಮಾಡಿ ಜಿನಾಲಯದ ನಿವಾಸಿಯಾಗಿರುವ ಸಾಧ್ಯತೆ ಇದೆ

ಇನ್ನೊಬ್ಬ ಯತಿ ವಾದಿರಾಜನು ಚಾಲುಕ್ಯ ಅರಸ ಜಯಸಿಂಹನಿಂದ ಸನ್ಮಾನಿತನಾದನೆಂದು ಹೇಳಿದರೆ, ಶಾಂತಿದೇವನು ಮತ್ತೊಬ್ಬ ಚಾಲುಕ್ಯ ಅರಸ ಆಹವಮಲ್ಲ (ಪ್ರಾಯಶಃ ಸೋಮೇಶ್ವರ I) ನಿಂದ ಶಬ್ದಚತುರ್ಮುಖ ಎಂಬ ಬಿರುದನ್ನು ಪಡೆದನೆಂದು ಹೇಳಿದೆ (ಶಾಸನ ೭೭) ಬಲಿಪುರದಲ್ಲಿ ಮಲ್ಲಿಕಾಮೋದ ಎಂಬ ಬಿರುದುಳ್ಳ ಚಾಲುಕ್ಯ ಅರಸ ಜಯಸಿಂಹನ ಹೆಸರಿನಲ್ಲಿ ಪ್ರಾಯಶಃ ಸ್ಥಾಪಿತವಾದ ಮಲ್ಲಿಕಾಮೋದಶಾಂತೀಶಬಸದಿ ಎಂಬ ಬಸದಿಯೊಂದಿದ್ದು ಇಲ್ಲಿ ಗುಣಚಂದ್ರನೆಂಬ ಹೆಸರನ್ನು ಹೊಂದಿದ್ದ ಮಲಧಾರಿಮುನಿಯು ವಾಸವಾಗಿದ್ದನೆಂದು ಹೇಳಿದೆ (ಶಾಸನ ೭೯)

ಹೀಗೆ ಈ ಸಂಪುಟದ ಶಾಸನಗಳಲ್ಲಿ ಆಳರಸರ ಹಾಗೂ ಜೈನಯತಿಗಳೊಂದಿಗೆ ಅವರ ಸಂಬಂಧದ ಬಗೆಗೆ ಅನೇಕ ಪರೋಕ್ಷ ಉಲ್ಲೇಖಗಳು ದೊರೆಯುತ್ತವೆ ಆದರೆ, ಹೆಚ್ಚಿನ ಸಂದರ್ಭಗಳಲ್ಲಿ ಇಂತಹ ಉಲ್ಲೇಖಗಳು ಕೇವಲ ಪ್ರಾಸಂಗಿಕವಾಗಿ ಬಂದಿರುವುದರಿಂದ ಯತಿಗಳ ಕಾಲಾನುಪೂರ್ವಿಯನ್ನಾಗಲೀ ಅಥವಾ ಆಳರಸರ ಗುರುತನ್ನಾಗಲೀ ಖಚಿತವಾಗಿ ನಿರ್ಧರಿಸಲು ಸಾಧ್ಯವಿಲ್ಲವಾಗಿದೆ

## ಗಂಗರು

೧೪೦ನೆಯ ಶಾಸನವೇ ಈ ಸಂಪುಟದಲ್ಲಿರುವ ಗಂಗರ ಅತ್ಯಂತ ಪ್ರಾಚೀನ ಶಾಸನವೆಂದು ಹೇಳಲಾಗಿದೆ ಅದು ಚಂದ್ರನಾಥ ಬಸದಿಯ ಬಳಿಯ ಬಂಡೆಯೊಂದರ ಮೇಲಿರುವ ಸಿವಮಾರನ ಬಸದಿ ಎಂದು ತಿಳಿಸುವ ಒಂದು ಚಿಕ್ಕ ಪಟ್ಟಿಕೆಯ ಶಾಸನ ಇಲ್ಲಿ ತಿಳಿಸಿರುವ ಬಸದಿಯು ಚಂದ್ರಪ್ರಭ ಬಸದಿಯಿರಬೇಕೆಂದೂ ಆದ್ದರಿಂದ ಅದನ್ನು ಸುಮಾರು ಕ್ರಿ ಶ ೮೦೦ರ ಕಾಲಕ್ಕೆ ಕಟ್ಟಿರಬೇಕೆಂದೂ ಶ್ರೀ ನರಸಿಂಹಾಚಾರ್ಯರು ಸೂಚಿಸಿದ್ದಾರೆ ಆದರೆ ಈ ರೀತಿಯ ನಿರ್ಧಾರಕ್ಕೆ ಬರಲು ಈ ಶಾಸನವು ಯಾವ ರೀತಿಯಲ್ಲಿಯೂ ಸಹಾಯಕವಾಗಿರುವುದಿಲ್ಲವಾದ್ದರಿಂದ ಈ ಹೇಳಿಕೆಯನ್ನು ಒಪ್ಪುವುದು ಕಷ್ಟ ಗಂಗರಾಜನೇ ಈ ಬಸದಿಯನ್ನು ಕಟ್ಟಿಸಿದ್ದಲ್ಲಿ ಮತ್ತು ಶಾಸನವು ಗಂಗರಾಜ ಇಮ್ಮಡಿ ಶಿವಮಾರನದೇ ಆಗಿದ್ದಲ್ಲಿ ಅದು ಆತನಿಗೆ ಸಂಬಂಧಿಸಿದ ಯಾವ ಇತರ ವಿವರಗಳನ್ನೂ, ಕಡೆಗೆ ಶಿವಮಾರನ ಬಿರುದುಗಳಾಗಲಿ ಅಥವಾ ಅವನು ಯಾವ ವಂಶಕ್ಕೆ ಸೇರಿದವನೆಂಬುದನ್ನಾಗಲಿ ತಿಳಿಸದಿರುವುದು ಆಶ್ಚರ್ಯ ಕೇವಲ ಹೆಸರಿನ ಆಧಾರದ ಮೇಲೆ ಈತನು ಗಂಗವಂಶದ ಅರಸನೆಂದು ತೀರ್ಮಾನಿಸುವುದು ಸಾಧಾರವಾಗದು ಅದರಲ್ಲಿನ ವಾಸ್ತು ಮತ್ತು ಮೂರ್ತಿಶಿಲ್ಪಗಳನ್ನು ಕೂಲಂಕಷವಾಗಿ ವಿವೇಚಿಸಿದಾಗ ಈ ಬಸದಿಯನ್ನು ಈಚಿನ ಕಾಲಕ್ಕೆ, ಎಂದರೆ ಸುಮಾರು ೯–೧೦ನೆಯ ಶತಮಾನಕ್ಕೆ, ಸೇರಿಸಬೇಕಾಗುತ್ತದೆ

ಆದ್ದರಿಂದ ಗಂಗರ ಅರಸನಾದ ಸತ್ಯವಾಕ್ಯ ಪೆರ್ಮಾನಡಿಯ ಕಾಲಕ್ಕೆ ಖಚಿತವಾಗಿ ಸೇರಬಹುದಾದ ೩೪೪ನೆಯ ಶಾಸನವೇ ಅತ್ಯಂತ ಪ್ರಾಚೀನವಾದುದಾಗುತ್ತದೆ ಲಿಪಿಯ ಆಧಾರದಿಂದ ಇದನ್ನು ೯ನೆಯ ಶತಮಾನದ ಶಾಸನವೆಂದು ಪರಿಗಣಿಸಿ ಇದರಲ್ಲಿ ತಿಳಿಸಿರುವ ರಾಜನು ಕ್ರಿ ಶ ೮೭೦ರಿಂದ ೯೧೯ರ ವರೆಗೆ ಆಳಿದ ಇಮ್ಮಡಿ ರಾಚಮಲ್ಲನೆಂದು ಗುರುತಿಸಬಹುದು ಆದ್ದರಿಂದ ಈ ದೊರೆಯ ೧೫ನೆಯ ಆಳಿಕೆಯ ವರ್ಷವೆಂದು ತಿಳಿಸುವ ಶಾಸನದ ಕಾಲ ಕ್ರಿ ಶ ೮೮೪–೮೫ ಆಗುತ್ತದೆ

ಚಿಕ್ಕಬೆಟ್ಟದ ಮೇಲಿರುವ ಸುಮಾರು ೧೦ನೆಯ ಶತಮಾನದ ವೀರಗಲ್ಲಿನ ಶಾಸನ (ನಂ ೧೭೧) ಗಂಗವಜ್ರನ ಲೆಂಕ

---

1 R Sewell and S K Iyengar *Historical Inscriptions of Southern India*, p 369

2 *Ibid* p 393

3 *Ep Ind*, Vol XV, pp 337 ff

ಬೋಯಿಗನು ರಕ್ಕಸಮಣಿಗೂ ವಡ್ಡಿಗ ಮತ್ತು ಕೋಣೆಯಗಂಗರಿಗೂ ನಡುವೆ ನಡೆದ ತುಮುಲ ಯುದ್ಧದಲ್ಲಿ ಸತ್ತುದನ್ನು ತಿಳಿಸುತ್ತದೆ ಈ ಶಾಸನಕ್ಕೆ ಕ್ರಿ ಶ ಸುಮಾರು ೯೪೦ರ ಕಾಲವನ್ನು ಕೊಟ್ಟಿದೆ[1] ಇಲ್ಲಿ ತಿಳಿಸಿರುವ ವಡ್ಡಿಗನನ್ನು ರಾಷ್ಟ್ರಕೂಟರ ಮುಮ್ಮಡಿ ಅಮೋಘವರ್ಷನೆಂದು ಗುರುತಿಸಲಾಗಿದೆ ಮುಮ್ಮಡಿ ಕೃಷ್ಣನ ದೇವೋಲಿ ತಾಮ್ರ ಶಾಸನದಿಂದ ಅವನು ಇನ್ನೂ ಯುವರಾಜನಾಗಿದ್ದಾಗಲೇ ಗಂಗರ ರಾಚಮಲ್ಲನ ಮೇಲೆ ಯುದ್ಧಕ್ಕೆ ಹೋಗಿ ಅವನನ್ನು ಪಕ್ಕಕ್ಕೆ ದೂಡಿ ಅವನ ತಮ್ಮನಾದ ಇಮ್ಮಡಿ ಬೂತುಗನನ್ನು ಗಂಗ ಸಿಂಹಾಸನದ ಮೇಲೆ ಕೂಡಿಸಿದುದಾಗಿ ತಿಳಿಸಿದೆ ಪ್ರಕೃತ ಶಾಸನದಲ್ಲಿ ಕೋಣೆಯಗಂಗನಿಗೆ ವಡ್ಡಿಗನು ನೆರವು ನೀಡಿದುದನ್ನು ತಿಳಿಸಿದೆ ವಡ್ಡಿಗನನ್ನು ಮುಮ್ಮಡಿ ಅಮೋಘವರ್ಷನೆಂದಿಟ್ಟುಕೊಂಡಲ್ಲಿ ಈ ಯುದ್ಧವು ಮುಮ್ಮಡಿ ರಾಚಮಲ್ಲನು ಕೋಣೆಯಗಂಗನ ಮೇಲೆ ನಡೆಸಿದ ಯುದ್ಧವಾಗಿದ್ದು ಕೋಣೆಯಗಂಗನನ್ನು ಇಮ್ಮಡಿ ಬೂತುಗನೆಂದು ಗುರುತಿಸಬೇಕಾಗುತ್ತದೆ ಈಗ ತಿಳಿದಿರುವಂತೆ ರಾಚಮಲ್ಲನ ಆಳಿಕೆಯಲ್ಲಿ ಕೊನೆಯ ವರ್ಷ ಸುಮಾರು ಕ್ರಿ ಶ ೯೩೩ ಆದ್ದರಿಂದ ಈ ಶಾಸನದ ಕಾಲ ಅದಕ್ಕಿಂತ ಒಂದೆರಡು ವರ್ಷಗಳು ಈಚಿನದು ಎಂದರೆ ಕ್ರಿ ಶ ಸು ೯೩೫ ಎಂದಿಟ್ಟುಕೊಳ್ಳಬಹುದು ಕೋಣೆಯಗಂಗನೇ ಬೂತುಗನೆಂದು ಖಚಿತವಾಗಿ ಗುರುತಿಸಲು ಬಾರದೆಂಬುದನ್ನು ನಾವು ನೆನಪಿನಲ್ಲಿಡಬೇಕು ಇದನ್ನು ಒಪ್ಪಿದಲ್ಲಿ ಮುಮ್ಮಡಿ ರಾಚಮಲ್ಲನಿಗೆ ಗಂಗವಜ್ರನೆಂಬ ಬಿರುದಿದ್ದಿತೆಂದು ನಾವು ಹೇಳಬಹುದು ವಡ್ಡಿಗ ಎಂಬುದು ಮುಮ್ಮಡಿ ಅಮೋಘವರ್ಷನ ಇನ್ನೊಂದು ಹೆಸರಾಗಿದೆ ಎಂಬುದೇ[2] ಹೀಗೆ ಗುರುತಿಸುವುದಕ್ಕೆ ಪೋಷಕವಾದ ವಿಷಯ ಮುಂದೆ ಇಮ್ಮಡಿ ಮಾರಸಿಂಹನೂ ಇದೇ ಬಿರುದನ್ನೇ ಹೊಂದಿದ್ದನು

೧೦ನೆಯ ಶತಮಾನಕ್ಕೆ ಸೇರಿದ ೧೯೦ನೆಯ ಶಾಸನವು ರಾಚಮಲ್ಲನ ಜಂಗಿನ ಸೇನಬೋವ ಸುಭಕರಯ್ಯನು ಮಂದಿಸಿದಂತೆ ತಿಳಿಸುತ್ತದೆ ಇಲ್ಲಿ ಬರುವ ರಾಚಮಲ್ಲನು ಗಂಗವಂಶಕ್ಕೆ ಸೇರಿದ ಇಮ್ಮಡಿ ರಾಚಮಲ್ಲನಿರಬಹುದೇ ಎನ್ನಿಸುತ್ತದೆ ಆದರೆ ಹೆಸರಿನ ಸಾದೃಶ್ಯ ಮತ್ತು ಕಾಲದ ಸರಿಹೊಂದಿಕೆಯನ್ನು ಬಿಟ್ಟರೆ ಇದಕ್ಕೆ ಬೇರೆ ಯಾವ ಆಧಾರಗಳೂ ಇಲ್ಲ

ನಂ ೧೪೭ ಒಂದು ತುಂಡು ಶಾಸನ ಇದರಲ್ಲಿ ಗಂಗರಾಜ್ಯ ಮತ್ತು ಎಱೆಗಂಗನ ಮಹಾಮಾತ್ಯನಾದ ಗುಱಪಾಳನ ಹೆಸರುಗಳಿವೆ ಈ ಶಾಸನದ ಕಾಲವಾದ ೧೦ನೆಯ ಶತಮಾನದಲ್ಲಿ ಒಂದನೆಯ ಬೂತುಗನ (ಸುಮಾರು ಕ್ರಿ ಶ ೮೮೩-೯೨೦) ಮಗ ಎಱೆಗಂಗನು ರಾಜನಾಗಿದ್ದನು ಗುಱಪಾಳನ ಅಳಿಯನಾದ ನಾಗವರ್ಮನ ಮಗನನ್ನು ಕುರಿತಾದ ಈ ಶಾಸನದಲ್ಲಿ ಗುಱಪಾಳನು ನರಸಿಂಹಮಂತ್ರಿಯ ಅಳಿಯನೆಂದೂ ತಿಳಿಸಿದೆ ಹೀಗೆ ಈ ಶಾಸನದಲ್ಲಿ ಗಂಗರಾಜನ ಇಬ್ಬರು ಮಂತ್ರಿಗಳ ಹೆಸರುಗಳು ತಿಳಿದುಬರುತ್ತವೆ

ಇಮ್ಮಡಿ ಮಾರಸಿಂಹನನ್ನು ಬಹುವಾಗಿ ಹೊಗಳಿರುವ ೭೪ನೆಯ ಶಾಸನದ ಕೆಲಭಾಗ ಮುಕ್ಕಾಗಿದೆ ಮಾರಸಿಂಹನ ಸಾಧನೆಗಳ ವಿವರ ಇದರಲ್ಲಿದೆ ತನ್ನ ಅಧಿರಾಜನಾದ ರಾಷ್ಟ್ರಕೂಟ ಮುಮ್ಮಡಿ ಕೃಷ್ಣನು ಗೂರ್ಜರರ ಮೇಲೆ ನಡೆಸಿದ ಯುದ್ಧಗಳಲ್ಲಿ ಭಾಗವಹಿಸಿ ಗೂರ್ಜರಾಧಿರಾಜ ಎನ್ನಿಸಿಕೊಂಡನು, ಅಲ್ಲನ ದರ್ಪವನ್ನಡಗಿಸಿದನು, ಶಬರನಾಯಕನೆನಿಸಿದ ನರಗ ಮತ್ತು ವನವಾಸಿದೇಶದ ರಾಜನನ್ನೂ ಸೋಲಿಸಿದನು ತನ್ನ ಶತ್ರುಗಳ ವಿರುದ್ಧ ಗೋಣೂರು, ಉಚ್ಚಂಗಿ, ಬನವಾಸಿ, ವಾಭಸೆಯಕೋಟೆ ಮುಂತಾದ ಕಡೆಗಳಲ್ಲಿ ನಡೆಸಿದ ಯುದ್ಧಗಳಲ್ಲಿ ಜಯಗಳಿಸಿದನು, ಚಾಲುಕ್ಯ ರಾಜಾದಿತ್ಯನನ್ನು ನಿರ್ಮೂಲಮಾಡಿದನು, ಇಂದ್ರರಾಜನಿಗೆ ಪಟ್ಟಗಟ್ಟಿದನು, ಮತ್ತು ವಜ್ಜಳನನ್ನು ಸೋಲಿಸಿದನು ಈ ಎಲ್ಲ ಸಾಧನೆಗಳಲ್ಲೂ ಈತನಿಗೆ ಮಂತ್ರಿಯಾಗಿದ್ದ ಚಾಮುಂಡರಾಯನ ನೆರವು ಬಹಳವಾಗಿ ಲಭಿಸಿತ್ತು

ಮುಮ್ಮಡಿ ಕೃಷ್ಣನ ಮೈದುನನೂ ಮಾಂಡಲಿಕನೂ ಆಗಿದ್ದ ಮಾರಸಿಂಹನು, ಆತನ ಮರಣಾನಂತರ—ಇಮ್ಮಡಿ ಕಕ್ಕನು ಚಾಲುಕ್ಯ ಇಮ್ಮಡಿ ತೈಲಪನಿಂದ ಸೋಲನ್ನನುಭವಿಸಿದ ಮೇಲೆ—ರಾಷ್ಟ್ರಕೂಟರ ಅರಸೊತ್ತಿಗೆಯನ್ನುಳಿಸಲು ವ್ಯರ್ಥಪ್ರಯತ್ನ ನಡೆಸಿದುದು ವಿದಿತವೇ ಇದೆ ಬಂಕಾಪುರದಲ್ಲಿ ನಾಲ್ವಡಿ ಇಂದ್ರನಿಗೆ ಪಟ್ಟಗಟ್ಟಿದನು ಆದರೆ ಅವನ ಪ್ರಯತ್ನ ಸಾಗಲಿಲ್ಲ

## ಚಾಮುಂಡರಾಯ

ಚಾಮುಂಡರಾಯನು ಗೊಮ್ಮಟೇಶ್ವರ ಬೃಹನ್ಮೂರ್ತಿಯನ್ನು ಶ್ರವಣಬೆಳಗೊಳದಲ್ಲಿನ ದೊಡ್ಡಬೆಟ್ಟದ ಮೇಲೆ ಸ್ಥಾಪಿಸಿದುದರ ಮೂಲಕ ಖ್ಯಾತಿವೆತ್ತ ಪುರುಷನು ಈತನು ಇಮ್ಮಡಿ ಮಾರಸಿಂಹನಿಗೂ, ನಾಲ್ವಡಿ ರಾಚಮಲ್ಲನಿಗೂ

---

[1] Introduction, p 43

[2] A S Altekar, *Rāshtrakūtas and their times* (2nd Ed 1967) p 114-15, ಎಂ ವಿ ಕೃಷ್ಣರಾವ್ ಮತ್ತು ಎಂ ಕೇಶವಭಟ್ಟ, ಕರ್ನಾಟಕದ ಇತಿಹಾಸ ದರ್ಶನ (1970) ಪು 57-58

ಮಂತ್ರಿಯಾಗಿದ್ದನೆಂಬುದು ತಿಳಿದಿದೆ ಈತನ 'ಚಾಮುಂಡರಾಯ ಪುರಾಣ'ದಿಂದ ಈತನಿಗೆ ಸಂಬಂಧಿಸಿದ ಹಲವಾರು ವಿವರಗಳೂ ತಿಳಿದಿವೆ ಈತನು ಬ್ರಹ್ಮಕ್ಷತ್ರ ಕುಲೋತ್ಪನ್ನನೆಂಬುದು ೩೮ಲನೆಯ ಶಾಸನದಿಂದ ಸ್ಪಷ್ಟವಾಗುತ್ತದೆ ನಾಲ್ಪಡಿ ಇಂದ್ರನ ಪರವಾಗಿ ತನ್ನ ಸ್ವಾಮಿಯಾದ ಇಮ್ಮಡಿಮಾರಸಿಂಹನು ಪಾತಾಳಮಲ್ಲಾನುಜನಾದ ವಜ್ಜಳ, ನೊಳಂಬರು, ರಣಸಿಂಗ ರಾಜ ಮುಂತಾದವರ ವಿರುದ್ಧ ಹೂಡಿದ ಕದನಗಳಲ್ಲಿ ಪಾಲ್ಗೊಂಡ ಈತನು ಶೂರಸೇನಾನಿಯೆಂದು ಶಾಸನದಲ್ಲಿ ವರ್ಣಿತನಾಗಿದ್ದಾನೆ

ಈ ಶತ್ರುಗಳಲ್ಲಿ ವಜ್ಜಳ ಎಂಬಾತನು ಶಿಲಾಹಾರ ಮನೆತನಕ್ಕೆ ಸೇರಿದ ಒಬ್ಬ ಮಾಂಡಲಿಕನೆಂದು ಹೇಳಲಾಗಿದೆ ಆದರೆ ಇದಕ್ಕೆ ಬದಲಾಗಿ ಚಿತ್ತೂರು ಜಿಲ್ಲೆಯ ಪುಂಗನೂರಿನ ಸುತ್ತಲಿನ ಪುಲಿನಾಡನ್ನು ಆಳುತ್ತಿದ್ದ ಅದೇ ಹೆಸರಿನ ಒಬ್ಬ ನಾಯಕ ನಿವನೆಂದೂ, ಮೊದಲು ಈತನು ರಾಷ್ಟ್ರಕೂಟ ಮುಮ್ಮಡಿ ಕೃಷ್ಣನ ಸಾಮಂತನಾಗಿದ್ದು, ತದನಂತರ ಸ್ವಾತಂತ್ರ್ಯವನ್ನು ಘೋಷಿಸಿದ ಕಾರಣ ಮಾರಸಿಂಹನಿಂದ ಸದೆಬಡೆಯಲ್ಪಟ್ಟನೆಂದೂ ಹುಲ್ಷ್ಷರವರು ಅಭಿಪ್ರಾಯ ಪಟ್ಟಿದ್ದಾರೆ[1] ನೊಳಂಬರ ಮಾಂಡಲಿಕನು ಇಮ್ಮಡಿ ಪೊಳಲ್ಚೋರನೋ, ವೀರಮಹೇಂದ್ರನೋ ಆಗಿರಬಹುದು

ಚಾಮುಂಡರಾಯನು ಇವರುಗಳಲ್ಲದೆ ಗಂಗಮಾರಸಿಂಹನು ಸೋಲಿಸಿದನೆನ್ನಲಾದ ಮೇಲೆ ಹೇಳಿದ ಇತರರ ವಿರುದ್ಧವೂ ಕದನವನ್ನು ಹೂಡಿದನು ಅವರಲ್ಲಿ ಅಲ್ಲ ಮತ್ತು ರಾಜಾದಿತ್ಯರೆಂಬಿಬ್ಬರು ನಾಯಕರನ್ನು ಇದುವರೆಗೂ ಖಚಿತವಾಗಿ ಗುರುತಿಸ ಲಾಗಿಲ್ಲ ಅಲ್ಲನು ಯಾರೆಂಬುದನ್ನು ಫ್ಲೀಟ್‌ರವರು ಹೇಳಲಾರದೆ ಹೋದರು[2] ರೈಸ್‌ರವರು ಆ ಹೆಸರನ್ನು 'ದಲ್ಲ' ಎಂದು ಓದಿದ್ದಾರೆ ಆದರೆ ರನ್ನನ ಅಜಿತಪುರಾಣವು ಇವನನ್ನು ಗುರುತಿಸುವಲ್ಲಿ ನೆರವಾಗುವ ಸೂಚನೆ ಇದೆ[3] ಮಲ್ಲಪನ ಮಗಳಾದ ಅತ್ತಿಮಬ್ಬೆಯು ವಾಜಿವಂಶದ ದಲ್ಲಪನ ಮಗನಾದ ನಾಗದೇವನನ್ನು ಮದುವೆಯಾಗಿದ್ದುದಾಗಿ ಆ ಗ್ರಂಥದಿಂದ ತಿಳಿದುಬರುತ್ತದೆ ಕ್ರಿ ಶ ೧೦೦೭ರ ಲಕ್ಕುಂಡಿ ಶಾಸನದಲ್ಲಿ[4] ಅತ್ತಿಮಬ್ಬೆಯ ಪತಿ ನಾಗದೇವನು ವಾಜಿಕುಲದ ಧಲ್ಲನ ಮಗನೆಂದು, ಚಾಲುಕ್ಯ ಇಮ್ಮಡಿ ತೈಲನ ಭುಜಾದಣ್ಡನೆಂದೂ ಹೇಳಿರುವುದು ಇದನ್ನು ಸ್ಥಿರಪಡಿಸುತ್ತದೆ ಈ ಧಲ್ಲನೇ ಪ್ರಕೃತ ಶಾಸನದ ಅಲ್ಲನಾಗಿರ ಬಹುದು ತೈಲನಿಗೆ ಒತ್ತಾಸೆಯಾಗಿ ನಿಂತ ಧಲ್ಲನು ಮುಮ್ಮಡಿ ಕೃಷ್ಣನ ಕಡುವಿರೋಧಿಯಾಗಿದ್ದುದು ಸ್ಪಷ್ಟ ಮುಮ್ಮಡಿ ಕೃಷ್ಣನ ಕಡೆಯ ವರ್ಷಗಳಲ್ಲಿ ರಾಷ್ಟ್ರಕೂಟರ ಬಲ ಕುಂದುತ್ತಿದ್ದು ರಾಜ್ಯದೊಳಗೇ ವಿರೋಧಿಗಳ ಬಲ ತಲೆಯೆತ್ತುತ್ತಿದ್ದಾಗ ಕೃಷ್ಣನ ಅತ್ಯಂತ ನಿಷ್ಠಾವಂತ ಸಾಮಂತನಾಗಿದ್ದ ಮಾರಸಿಂಹನು ಇವರ ದಂಗೆಗಳನ್ನು ಅಡಗಿಸಲು ಶಕ್ತಿಮೀರಿ ಪ್ರಯತ್ನಿಸಿದುದು ಸ್ವಾಭಾವಿಕವೇ ತನ್ನ ಸ್ವಾಮಿಯ ಪರವಾಗಿ ಚಾಮುಂಡರಾಯನು ಈ ಕದನಗಳಲ್ಲಿ ಭಾಗವಹಿಸಿದನು

ಮಾರಸಿಂಹನು ಸೋಲಿಸಿದ ಇನ್ನೊಬ್ಬ ವ್ಯಕ್ತಿ ಚಾಲುಕ್ಯವಂಶಚೂಡಾಮಣಿ ಎನಿಸಿಕೊಂಡ ರಾಜಾದಿತ್ಯ ರಾಜಾದಿತ್ಯನ ಕ್ರಿ ಶ ೯೬೧ರ ಹಿರೇಕೋಗಿಲೂರು ತಾಮ್ರಶಾಸನದಿಂದ[5] ಅವನು ಮುಮ್ಮಡಿ ಕೃಷ್ಣನ ಸಾಮಂತನೆಂದೂ ಚೋಳ, ಚೇರ ಮತ್ತು ಪಾಂಡ್ಯರ ಮೇಲಿನ ಯುದ್ಧಗಳಲ್ಲಿ ಭಾಗವಹಿಸಿದ್ದನೆಂದೂ ತಿಳಿದುಬರುತ್ತದೆ ಮೇಲ್ಪಾಟಿಯಲ್ಲಿ ಬೀಡು ಬಿಟ್ಟಿದ್ದಾಗ ಅವನು ದತ್ತಿ ಬಿಟ್ಟುದನ್ನು ಈ ಶಾಸನ ತಿಳಿಸುತ್ತದೆ ಈ ಇಮ್ಮಡಿ ರಾಜಾದಿತ್ಯನು ಚಾಲುಕ್ಯ ವಂಶಕ್ಕೆ ಸೇರಿದವನು, ಅವನಿಗೆ ಇಬ್ಬರು ರಾಣಿಯರು—ಹಿರಿಯವಳು ಚಕ್ರವರ್ತಿಯ ಮಗಳು, ಕಿರಿಯವಳು ಗಂಗಗಾಂಗೇಯನ ಮಗಳು ಆದ್ದರಿಂದ ಈತನು ಕ್ರಿ ಶ ೯೬೧ರವರೆಗೂ ರಾಷ್ಟ್ರಕೂಟರ ನಿಷ್ಠಸಾಮಂತನಾಗಿದ್ದನೆಂಬುದು ವ್ಯಕ್ತವಾಗುತ್ತದೆ ಕ್ರಿ ಶ ೯೬೭ರಲ್ಲಿ ಪಶ್ಚಿಮ ಚಾಲುಕ್ಯರ ಇಮ್ಮಡಿ ತೈಲಪನೇ ಮುಮ್ಮಡಿ ಕೃಷ್ಣನ ಸಾಮಂತನಾಗಿದ್ದುದು ವ್ಯಕ್ತಪಟ್ಟಿದೆ[6] ಆಗ ರಾಜನು ಮೇಲ್ಪಾಟಿಯಲ್ಲಿ ಆಳುತ್ತಿದ್ದನು ಆದರೆ ಮುಮ್ಮಡಿ ಕೃಷ್ಣನು ಗತಿಸುತ್ತಿದ್ದಂತೆಯೇ ಈ ಸಾಮಂತನು ದಂಗೆಯೆದ್ದು ಕಡೆಗೆ ರಾಷ್ಟ್ರಕೂಟರನ್ನು ಮೂಲೆಗೊತ್ತಿದನು ಈ ದಂಗೆಯಲ್ಲಿ ಮೇಲೆ ತಿಳಿಸಿದ ರಾಜಾದಿತ್ಯನು ಇವನಿಗೆ ಸಹಾಯ ಮಾಡಿದ್ದಿರಬೇಕು, ಮಾರಸಿಂಹನು ಅವನನ್ನೆದುರಿಸಿದುದು ಸ್ವಾಭಾವಿಕ ಆದ್ದರಿಂದ ಪ್ರಕೃತ ಶಾಸನದ ರಾಜಾದಿತ್ಯನು ಹಿರೇಕೋಗಿಲೂರು ತಾಮ್ರ ಶಾಸನದ ರಾಜಾದಿತ್ಯನೇ ಆಗಿರುವಂತೆ ತೋರುತ್ತದೆ

---

[1] ನೆಲಮಂಗಲ ಲಕ್ಷ್ಮೀನಾರಾಯಣರಾವ್ ಮತ್ತು ಆರ್ ಎಸ್ ಪಂಚಮುಖಿ ಕರ್ನಾಟಕದ ಅರಸು ಮನೆತನಗಳು, ಪು ೧೯೭, ಟಿಪ್ಪಣಿ ೭

[2] *Ep Ind*, Vol V, p 170, note 2

[3] ಆಶ್ವಾಸ ೩೮ನೆಯ ಪದ್ಯದ ಮುಂದಿನ ಗದ್ಯಭಾಗ

[4] *S I I*, Vol XI, pt I, Nos 52–53

[5] *Mysore Archaeological Reports*, 1935, p 114

[6] *A R S I E*, 1933-34, Bk 172

೧೫೦ನೆಯ ಶಾಸನದಿಂದ ಚಾಮುಂಡರಾಯನಿಗೆ ಜಿನದೇವಣನೆಂಬ ಒಬ್ಬ ಮಗನಿದ್ದನೆಂದು ತಿಳಿದುಬರುತ್ತದೆ ಈತನು ಅಜಿತಸೇನಮುನಿಯ ಶಿಷ್ಯನು ಬೆಳ್ಗೊಳದಲ್ಲಿ ಜಿನಗೃಹವೊಂದನ್ನು ಈತನು ಕಟ್ಟಿಸಿದನೆಂದು ಆ ಶಾಸನ ತಿಳಿಸಿದೆ

ಹತ್ತನೆಯ ಶತಮಾನದ ೨೭೨, ೨೭೩ ಮತ್ತು ೨೭೬ನೆಯ ಶಾಸನಗಳು ಬಾಹುಬಲಿಮೂರ್ತಿಯನ್ನು 'ಚಾಮುಣ್ಡರಾಜಂ ಮಾಡಿಸಿದಂ' ಎಂದು ಹೇಳುತ್ತವೆ ೧೨ನೆಯ ಶತಮಾನಕ್ಕೆ ಸೇರಿದ ಬೊಪ್ಪಣಪಂಡಿತನ 'ಗೊಮ್ಮಟಜಿನೇಂದ್ರಸ್ತವಶಾಸನ' (ನಂ ೩೩೬)ದಲ್ಲಿ ಈ ಮೂರ್ತಿಯನ್ನು ಚಾಮುಣ್ಡರಾಯನು ಸ್ಥಾಪಿಸಿದನೆಂದು ಸ್ಪಷ್ಟವಾಗಿ ಹೇಳಿದೆ ಆದರೆ, ಚಿಕ್ಕಬೆಟ್ಟದ ಮೇಲಿನ ಚಾಮುಂಡರಾಯ ಬಸದಿಯನ್ನು ಸಹ ಈತನೇ ಕಟ್ಟಿಸಿದನೆಂಬ ವಿಷಯದಲ್ಲಿ ಮಾತ್ರ ಶ್ರೀ ನರಸಿಂಹಾಚಾರ್ಯರು ಹೊಂದಿದಷ್ಟು ಖಚಿತವಾದ ಅಭಿಪ್ರಾಯವನ್ನು ವ್ಯಕ್ತಪಡಿಸಲು ಸಾಧ್ಯವಾಗುವುದಿಲ್ಲ[1] ೨೭೨, ೨೭೩, ೨೭೬ರ ಶಾಸನಗಳಂತಹುದೇ ಶಾಸನ ಈ ಬಸದಿಯ ಮುಂಭಾಗದ ಜಗತಿಯ ಉಭಯಪಾರ್ಶ್ವಗಳ ಗೋಡೆಯ ಕೆಳಗಣ ದಿಂಡಿನ ಮೇಲಿದೆ 'ಶ್ರೀ ಚಾಮುಣ್ಡರಾಜಂ ಮಾಡಿಸಿದಂ' ಎಂಬ ಈ ಶಾಸನವನ್ನು ಇತರ ಶಾಸನಗಳಂತೆ ಕ್ರಿ ಶ ೯೮೨ಕ್ಕೆ ಅನ್ವಯಿಸಲಾಗದು ಈ ಶಾಸನದ ಲಿಪಿ ಅವುಗಳಿಗಿಂತ ನಂತರದ ಕಾಲದ್ದು ಬಹುಶಃ ೧೧ನೆಯ ಶತಮಾನಕ್ಕೆ ಸೇರಬಹುದಾದದ್ದು ಇದೇ ಬಸದಿಯ ಪಾರ್ಶ್ವತೀರ್ಥಂಕರನ ವಿಗ್ರಹದ ಪೀಠದ ಮೇಲಿನ ೧೫೦ನೆಯ ಶಾಸನದಿಂದ ಬೆಳ್ಗೊಳದಲ್ಲಿ ಚಾಮುಂಡರಾಯನ ಮಗನಾದ ಜಿನದೇವಣನು ಜಿನಗೃಹವನ್ನು ಕಟ್ಟಿದ ವಿಷಯ ತಿಳಿದಿದೆ ಎಂದು ಮೊದಲೇ ಹೇಳಿದ್ದೇವೆ ಈ ಶಾಸನ ಸಹ ೧೧ನೆಯ ಶತಮಾನದ್ದೇ ಆತನು ಕಟ್ಟಿಸಿದ ಜಿನಗೃಹ ಯಾವುದು ಎಂಬುದು ತಿಳಿಯದು ಈ ಬಸದಿಯೊಳಗಡೆಯೇ ಇರುವ ನೇಮೀಶ್ವರನ ವಿಗ್ರಹದ ಪೀಠದಲ್ಲಿ ಸುಮಾರು ೧೨ನೆಯ ಶತಮಾನಕ್ಕೆ ಸೇರಿದ ಶಾಸನವೊಂದನ್ನು ಕೆತ್ತಲಾಗಿದೆ ಗಂಗರಾಜನ ಮಗನಾದ ಏಚಣನು ಬೊಪ್ಪಣ ಚೈತ್ಯಾಲಯವೆಂಬ ಜಿನಾಲಯವನ್ನು ಕಟ್ಟಿಸಿದನೆಂದು ಇದು ಹೇಳುತ್ತದೆ ಈ ಶಾಸನದ ಮೊದಲೆರಡು ಸಾಲುಗಳು ಮಾತ್ರ ನರಸಿಂಹಾಚಾರ್ಯರ ದೃಷ್ಟಿಗೆ ಬಿದ್ದಿತ್ತು ಅವರಿಗೆ ಕಾಣದಿದ್ದ ಮೂರನೆಯ ಸಾಲಿನಲ್ಲಿ 'ಬಿರುದರೂವಾರಿ ಮುಖತಿಳಕ' ನೆಂಬ ಬಿರುದನ್ನು ಪಡೆದಿದ್ದ ರೂವಾರಿ ಹೊಯ್ಸಳಾಚಾರಿಯ ಮಗ ಗಙ್ಗಾಚಾರಿವರ್ಧಮಾನಾಚಾರಿಯ ಹೆಸರಿದೆ (ಶಾಸನ ೧೪೯)

ಇದೇ ರೂವಾರಿಯು ಕಾಲಸೂಚಿತವಾಗಿರುವ ಕೆಲವು ಶಾಸನಗಳಲ್ಲಿ ಉಲ್ಲೇಖಗೊಂಡಿದ್ದಾನೆ ಕ್ರಿ ಶ ೧೧೨೯, ೧೧೧೫ ಮತ್ತು ೧೧೪೯ನೆಯ ವರ್ಷಗಳ ಕ್ರಮವಾಗಿ ೬೭,೧೫೬ ಮತ್ತು ೫೮೬ನೆಯ ಶಾಸನಗಳಲ್ಲಿ ಈತನನ್ನು ಗಂಙ್ಗಾಚಾರಿ ಎಂದೂ ೮೨, ೧೩೫ ಮತ್ತು ೧೩೬ನೆಯ, ಕ್ರಿ ಶ ೧೧೧೮, ೧೧೨೩ ಮತ್ತು ೧೧೨೦ನೆಯ ವರ್ಷಗಳ ಶಾಸನಗಳಲ್ಲಿ ವರ್ಧಮಾನಾಚಾರಿ ಎಂದೂ ಕರೆಯಲಾಗಿದೆ ಆದರೆ ೧೪೯ನೆಯ ಶಾಸನದಲ್ಲಿ ಗಂಙ್ಗಾಚಾರಿ ವರ್ಧಮಾನಾಚಾರಿಯು ಹೊಯ್ಸಳಾಚಾರಿಯ ಮಗನೆಂದೂ, ೧೩೬ನೆಯ ಶಾಸನದಲ್ಲಿ ವರ್ಧಮಾನಾಚಾರಿಯು ಇದೇ ಹೊಯ್ಸಳಾಚಾರಿಯ ಮಗನೆಂದೂ ಹೇಳಿದೆ ಇವೆಲ್ಲವುಗಳಲ್ಲಿಯೂ ಈತನಿಗೆ ಒಂದೇ ಬಿರುದು ಇದೆ ಆದ್ದರಿಂದ ಗಂಗಾಚಾರಿ ಎಂಬುದು ವರ್ಧಮಾನಾಚಾರಿಯ ಇನ್ನೊಂದು ಹೆಸರೆಂಬುದು ಸ್ಪಷ್ಟ ಇವುಗಳಿಂದೆಲ್ಲ ಚಾಮುಂಡರಾಯ ಬಸದಿಯ ಕೆಲವು ಭಾಗಗಳಾದರೂ, ನಂತರ, ಸುಮಾರು ೧೨ನೆಯ ಶತಮಾನದಲ್ಲಿ ಕಟ್ಟಲಾದವುಗಳೆಂದು ತೀರ್ಮಾನಿಸಬಹುದು

ಚಾಮುಂಡರಾಜ ಎಲ್ಲಿಯವರೆಗೆ ಜೀವಿಸಿದ್ದನೆಂಬುದು ತಿಳಿಯದು ಹತ್ತನೆಯ ಶತಮಾನದ ಅಂತ್ಯದವರೆವಿಗೂ ಬದುಕಿದ್ದನೆಂದು ಭಾವಿಸಬಹುದು ೧೧ನೆಯ ಶತಮಾನದ ಮೊದಲ ದಶಕದಲ್ಲಿ ಈತನ ಮಗನಾದ ಜಿನದೇವಣನು ಚಾಮುಂಡರಾಯ ಬಸದಿಯ ಗರ್ಭಗೃಹವನ್ನು ಕಟ್ಟಿಸಿರಬಹುದೆಂಬುದು ೧೫೦ನೆಯ ಶಾಸನದಿಂದ ವ್ಯಕ್ತವಾಗುತ್ತದೆ ಇದಕ್ಕೆ ನಂತರ ಇತರ ಭಾಗಗಳನ್ನು ಸೇರಿಸಿರಬೇಕು ಆದ್ದರಿಂದ ಸಾಂಪ್ರದಾಯಿಕವಾಗಿ ಕರೆಯಲಾದ ಚಾಮುಂಡರಾಜ ಬಸದಿಯನ್ನು ಕಟ್ಟಿಸಿದಾತನು ಚಾಮುಂಡರಾಯನಲ್ಲ ೧೫೧ನೆಯ ಪಟ್ಟಿಕೆಯ ಶಾಸನಗಳನ್ನು, ೧೨ನೆಯ ಶತಮಾನದಲ್ಲಿನ ಯಾರೋ ಬರೆದಿರಬೇಕು ಆ ವೇಳೆಗೆ ಚಾಮುಂಡರಾಯನ ಕೀರ್ತಿ ಅಮರವಾಗಿತ್ತು

## ರಾಷ್ಟ್ರಕೂಟರು

ಈ ಸಂಪುಟದಲ್ಲಿ ರಾಷ್ಟ್ರಕೂಟರ ಎರಡು ಶಾಸನಗಳಿವೆ ಶ್ರೀವಲ್ಲಭಮಹಾರಾಜನ ಮಗ ರಣಾವಲೋಕ ಕಂಬಯ್ಯನ ಆಳ್ವಿಕೆಗೆ ಸೇರಿದ ೩೮ನೆಯ ಶಾಸನ ತ್ರುಟಿತವಾಗಿದೆ ಭೂಮಿದಾನವನ್ನು ಈ ಶಾಸನ ಸೂಚಿಸುವಂತೆ ತೋರುತ್ತದೆ ಕ್ರಿ ಶ ೮ನೆಯ ಶತಮಾನದ ಈ ಶಾಸನದಲ್ಲಿ ಭೂಮಿಯ ಎಲ್ಲೆಯನ್ನು ಹೇಳಿದೆ ಸೇನ ಅಡಿಗಳ್ ಎಂಬ ಜೈನಯತಿಯು ಈ ದಾನವನ್ನು ಪಡೆದಂತೆ ತೋರುತ್ತದೆ ಗಂಗವಾಡಿಯನ್ನು ಗೆದ್ದು ಶಿವಮಾರನನ್ನು ಸೆರೆಯಲ್ಲಿಟ್ಟಮೇಲೆ ಧ್ರುವನು ತನ್ನ ಮಗ ಕಂಬಯ್ಯನನ್ನು

[1] Introduction, p 6

ಈ ಪ್ರಾಂತಕ್ಕೆ ಅಧಿಪತಿಯನ್ನಾಗಿ ನೇಮಿಸಿದುದು ವಿದಿತ ಸ್ತಂಭನೆಂದು ಹೆಸರಿರುವ ಈ ರಾಜಕುಮಾರನಿಗೆ ಸೇರಿದುದು ಈ ಶಾಸನ ಈ ಶಾಸನದಲ್ಲಿ ಮನಸಿಜನ ರಾಣಿ–ಬಹುಶಃ ಬೆನೆಎತ್ತಿ–ಯನ್ನು ಉಲ್ಲೇಖಿಸಿದೆ ಆದರೆ ಈ ಮನಸಿಜ ಯಾರೆಂಬುದು ತಿಳಿಯದು

ಇನ್ನೊಂದು ಶಾಸನ (ನಂ ೧೬೩) ರಾಷ್ಟ್ರಕೂಟ ಯುವರಾಜ ನಾಲ್ಕನೆಯ ಇಂದ್ರನಿಗೆ ಸೇರಿದುದು ಇಂದ್ರನ ನೆನಪಿಗಾಗಿ ನಿಲ್ಲಿಸಿರುವ ಈ ಶಾಸನದಲ್ಲಿ ಅವನ ಪ್ರಶಸ್ತಿ ಇದೆ ಅವನು ಕೃಷ್ಣರಾಜೇಂದ್ರನ ಮಗನ ಮಗ, ಗಂಗಗಾಂಗೇಯನ ಮಗಳ ಮಗ ಮತ್ತು ರಾಜಚೂಡಾಮಣಿಯ ಅಳಿಯ ಕಂದುಕಕ್ರೀಡೆಯಲ್ಲಿ ಈ ರಾಜನು ನಿಷ್ಣಾತನೆಂದು ಶಾಸನ ಸಾರುತ್ತದೆ ಶಾಸನದಲ್ಲಿ ಸುಕರ, ದುಷ್ಕರ, ವಿಷಮ, ವಿಷಮದುಷ್ಕರ ಮೊದಲಾದ ಚಾರಣೆಗಳನ್ನು, ಒಳಗೂ–ಹೊರಗೂ, ಬಲಕ್ಕೂ–ಎಡಕ್ಕೂ ಚಾರಿಸುವುದರಲ್ಲಿ ಇಂದ್ರರಾಜನು ನಿಷ್ಣಾತನೆಂದೂ ನಾಲ್ಕು ಕಡೆಯೂ ನಡೆಸಿದ ಇಂಥ ಚಾರಣೆಗಳು ಒಟ್ಟು ೩೨ ಆಗುವುವೆಂದೂ ತಿಳಿಸಿದೆ ಮಂಡಲಮಾಲೆ, ತ್ರಿಮಂಡಲ, ಯಾಮಕಮಂಡಲ, ಅರ್ಧಚಂದ್ರ, ಸರ್ವತೋಭದ್ರ, ಉದ್ವರ್ತ, ಚಕ್ರವ್ಯೂಹ ಮೊದಲಾದ ಚಾರಣೆಗಳಲ್ಲಿಯೂ ಇಂದ್ರರಾಜನು ನುರಿತವನೆಂದೂ ಶಾಸನ ವಿಶದಪಡಿಸುತ್ತದೆ ಇದರಿಂದ ೧೦ನೆಯ ಶತಮಾನದ ಹೊತ್ತಿಗೆ ಈ ಕಂದುಕಕ್ರೀಡೆಯು (ಪೋಲೋ) ರಾಜಮನೆತನಗಳಲ್ಲಿ ಅತಿ ಮೆಚ್ಚಿಕೆಯ ಆಟವಾಗಿತ್ತೆಂದೂ, ಅದರಲ್ಲಿ ಹಲವು ಬಗೆಯ ಕೌಶಲ್ಯವನ್ನು ಅಳವಡಿಸಲಾಗಿತ್ತೆಂದೂ ತಿಳಿಯಬಹುದು ಇಂದ್ರನು ಕ್ರಿ ಶ ೯೮೨ ಮಾರ್ಚ್ ೨೦ರಂದು ಸಲ್ಲೇಖನವನ್ನು ಆಚರಿಸಿ ಗತಿಸಿದುದಾಗಿ ಶಾಸನವು ತಿಳಿಸುತ್ತದೆ

ಇಮ್ಮಡಿ ಮಾರಸಿಂಹನು ಈ ರಾಜಕುಮಾರನನ್ನು ರಾಷ್ಟ್ರಕೂಟ ಸಿಂಹಾಸನದ ಮೇಲೆ ಕೂಡಿಸಲು ಸರ್ವಪ್ರಯತ್ನ ಮಾಡಿದುದು, ಆದರೆ ಅವೆಲ್ಲವೂ ವಿಫಲವಾದುದೂ ವಿದಿತ ಬಂಕಾಪುರದಲ್ಲಿ ಈತನಿಗೆ ಕ್ರಮಬದ್ಧವಾದ ಪಟ್ಟಾಭಿಷೇಕೋತ್ಸವವೇನೋ ನೆರವೇರಿತು ಆದರೆ ಮಾರಸಿಂಹನು ಕ್ರಿ ಶ ೯೭೫ರಲ್ಲಿ ಬಂಕಾಪುರದಲ್ಲಿ ಕಾಲವಾದರೆ ಇಂದ್ರನು ಕ್ರಿ ಶ ೯೮೨ರಲ್ಲಿ ಶ್ರವಣಬೆಳಗೊಳದಲ್ಲಿ ತೀರಿಕೊಂಡುದಾಗಿ ಹೇಳಲಾಗಿದೆ ಆದರೆ ಶಾಸನದಲ್ಲಿ ಇಂದ್ರನು ಎಲ್ಲಿ ತೀರಿಕೊಂಡನೆಂದು ತಿಳಿಸಿಲ್ಲ ಡಾ ದೇಸಾಯಿಯವರು ಬಂಕಾಪುರವು ೧೨ನೆಯ ಶತಮಾನದಲ್ಲಿಯೂ ಇಂದ್ರವಲ್ಲಭನ ರಾಜಧಾನಿಯೆಂದು ಪ್ರಸಿದ್ಧವಾಗಿದ್ದುದರಿಂದ ಇಂದ್ರನು ತನ್ನ ಕೊನೆಗಾಲದವರೆಗೂ ಅಲ್ಲಿಯೇ ಇದ್ದಿರಬೇಕೆಂದು ಸೂಚಿಸಿದ್ದಾರೆ[1] ಶ್ರವಣಬೆಳಗೊಳದ ಶಾಸನದಲ್ಲಿ ಅವನು ಎಲ್ಲಿ ತೀರಿಕೊಂಡನೆಂದು ತಿಳಿಸಿಲ್ಲ ಈ ಶಾಸನಗಂಬದ ಪಶ್ಚಿಮ ಮುಖದ ಮೇಲಿರುವ ಕೊನೆಯ ಭಾಗವು ಹೇಮಾವತಿಯಲ್ಲಿರುವ ಒಂದು ಕಲ್ಲಿನ ಮೇಲೂ ಇರುವುದು ಕುತೂಹಲಕಾರಿಯಾಗಿದೆ[2] ಇದು ಇಂದ್ರನು ಹೇಮಾವತಿಯಲ್ಲಿ ತೀರಿಕೊಂಡಿರಬೇಕೆಂಬ ಒಂದು ಊಹೆಗೆ ಎಡೆಕೊಟ್ಟಿದೆ ಶಾಸನದ ಪ್ರತಿಯೊಂದು ಅಲ್ಲಿ ದೊರೆತಿರುವುದೇ ಈ ಊಹೆಗೆ ಕಾರಣ ಆದರೆ ಇದು ಸಹೇತುಕವಾಗಿಲ್ಲ

೧೬೫ನೆಯ ಶಾಸನವೂ ಕ್ರಿ ಶ ೯೮೨ನೆಯ ವರ್ಷದ್ದೆಂದೇ ಹೇಳಬಹುದು ಇದರಲ್ಲಿ ನಮೂದಿಸಲಾದ ರಾಜಚೂಡಾಮಣಿಯು ಇಂದ್ರನ ಶಾಸನದಲ್ಲಿ (ನಂ ೧೬೩) ತಿಳಿಸಿರುವವನೇ ಆಗಿರಬಹುದು ಆದರೆ ಇದು 'ಮಾವನಗಂಧಹಸ್ತಿ' ಮತ್ತು 'ಆಹವಶೌಂಡ' ಎಂದು ವರ್ಣಿತನಾದ ಪಿಟ್ಟುಗ (ಅಥವಾ ಪಿಟ್ಟ)ನ ಸಾವನ್ನು ತಿಳಿಸುತ್ತದೆ ಇವರಿಬ್ಬರ ನಡುವೆ ಏನಾದರೂ ಸಂಬಂಧವಿದ್ದಿತೇ, ಹಾಗಿದ್ದಲ್ಲಿ ಅದೆಂತಹುದು ಎಂದು ಹೇಳಲು ಸಾಧ್ಯವಿಲ್ಲ

## ಚಾಲುಕ್ಯರು

೧೧ನೆಯ ಶತಮಾನಕ್ಕೆ ಸೇರಿದ ೧೮೮ನೆಯ ಶಾಸನವು ಜಗಭಕ್ಷಣ ಚಕ್ರವರ್ತಿ ಎಂಬ ಬಿರುದುಳ್ಳ ಗೊಗ್ಗಿ ಎಂಬುವನ ಹೆಸರನ್ನು ಹೇಳುತ್ತದೆ, ಬಹುಶಃ ಅವನಸಾವನ್ನು ಅದು ತಿಳಿಸಬಹುದು ಹಿಂದಿನ ಆವೃತ್ತಿಯಲ್ಲಿ ಈತನು 'ಬಹುಶಃ ವರುಣದಲ್ಲಿರುವ ಎ ಕ III ಮೈಸೂರು ೩೭ನೆಯ ಶಾಸನದಲ್ಲಿ ಬರುವ ಅದೇ ಹೆಸರಿನ ಚಾಲುಕ್ಯನಾಯಕನೇ ಇರಬೇಕು' ಎಂದು ತಿಳಿಸಿದೆ ಆದರೆ ಹೆಸರಿನ ಸಾದೃಶ್ಯವೊಂದನ್ನು ಬಿಟ್ಟರೆ ಈ ಹೇಳಿಕೆಗೆ ಬೇರೆ ಆಧಾರವಿಲ್ಲ ಹೀಗೆ ಗುರುತಿಸುವುದಕ್ಕೆ ಇದು ಯಾವ ರೀತಿಯಲ್ಲಿಯೂ ಆಧಾರವಾಗಲಾರದು

ಚಾಲುಕ್ಯವಂಶದ ರಾಜರಾದ ಜಯಸಿಂಹ ಮತ್ತು ಆಹವಮಲ್ಲರು ಜೈನ ಆಚಾರ್ಯರನ್ನು ಗೌರವಿಸಿದರೆಂದು ಹಿಂದೆಯೇ ತಿಳಿಸಿದೆ

---

[1] *S I I*, Vol XV, Introduction, pp ii–iii
[2] *E C*, Vol XII, Si 27

ಈ ಸಂಪುಟದಲ್ಲಿರುವ ಚಾಲುಕ್ಯರ ಶಾಸನಗಳೆಂದರೆ ನಂ ೫೩, ೫೪ ಮತ್ತು ೫೮ ಇವು ತ್ರಿಭುವನಮಲ್ಲ ಆರನೆಯ ವಿಕ್ರಮಾದಿತ್ಯನ ಆಳ್ವಿಕೆಗೆ ಸೇರಿದುದಾದರೂ ಇವರ ಸಾಮಂತರಾಗಿದ್ದ ಹೊಯ್ಸಳ ಎಱೆಯಂಗ, ವಿಷ್ಣುವರ್ಧನ ಮತ್ತು ಒಂದನೆಯ ನರಸಿಂಹನಿಗೆ ಸೇರಿದುವು ಇವರು ಎಲ್ಲರೀತಿಯಲ್ಲಿಯೂ ಸ್ವತಂತ್ರರಾಗಿದ್ದರೂ ಹೆಸರಿಗೆ ಮಾತ್ರ ಚಾಲುಕ್ಯರಿಗೆ ವಿಧೇಯರಾಗಿದ್ದರು ಆದ್ದರಿಂದ ಈ ಶಾಸನಗಳ ವಿಷಯವು ಮುಂದೆ ಬರುತ್ತದೆ

ಪ್ರಾಸಂಗಿಕವಾಗಿ ಇಲ್ಲಿ ಕ್ರಿ ಶ ೧೦೭೯ನೆಯ ವರ್ಷದ ಬೆಕ್ಕ ಗ್ರಾಮದಲ್ಲಿ ದೊರೆತ ೫೪ನೆಯ ಶಾಸನವನ್ನು ಗಮನಿಸಬಹುದು ವಿದ್ವಾಂಸರ ಗಮನಕ್ಕೆ ಬಹುಮಟ್ಟಿಗೆ ಬಾರದ ಚಾಲುಕ್ಯವಂಶದ ಮಾಂಡಲಿಕನೊಬ್ಬನ ಪ್ರಸ್ತಾಪವಿದರಲ್ಲಿದೆ ಈತನು ವಿಷ್ಣುವರ್ಧನ ಜಗದೇಕಮಲ್ಲ ನರಸಿಂಹ ಹೊಯ್ಸಳದೇವನ ಅಧೀನನಾಗಿದ್ದಂತೆ ತೋರುತ್ತದೆ ಶಾಸನದಲ್ಲಿ ಈತನ ವಂಶಾವಳಿಯನ್ನು ಕೊಟ್ಟಿದೆ




ಈ ಹುಳ್ಳರಸನು ತನ್ನ ಅಯ್ಯಂದಿರು ಕಟ್ಟಿಸಿದ ದೇವಾಲಯವನ್ನು ಜೀರ್ಣೋದ್ಧಾರಗೊಳಿಸಿದನು ಅಲ್ಲದೆ ಸೋಮೇಶ್ವರ ಮತ್ತು ಮುದ್ದೇಶ್ವರ ದೇವಾಲಯಗಳಿಗೆ ಭೂಮಿದಾನವನ್ನು ಮಾಡಿದನು 'ತಂದೆಮೂವರುಂ' ಮಾಡಿಬಿಟ್ಟ ದತ್ತಿ ಎಂದಿರುವುದರಿಂದ ಈ ದಾನದಲ್ಲಿ ಈತನ ತಂದೆ ಹಾಗೂ ದೊಡ್ಡಪ್ಪಂದಿರು ಸಹ ಭಾಗಿಗಳಾಗಿದ್ದಂತೆ ತೋರುತ್ತದೆ ಈ ಶಾಸನದಲ್ಲಿ ಕಾಲನಿರ್ದೇಶವಿದೆ ಇದು ಶಕವರ್ಷ ೧೦೦೧ನೆಯ ವರ್ಷದ್ದೆಂದು ಹೇಳಿದೆ ಇದು ಕ್ರಿ ಶ ೧೦೭೯ಕ್ಕೆ ಸರಿಹೋಗುತ್ತದೆ ಆದರೆ ಈ ವೇಳೆಗೆ ಮೊದಲನೆಯ ನರಸಿಂಹನು ಇನ್ನೂ ಅಧಿಕಾರಕ್ಕೆ ಬಂದಿರಲಿಲ್ಲ ಆತನು ಆಳತೊಡಗಿದುದು ಕ್ರಿ ಶ ೧೧೫೨ರಿಂದ ಶಕಕಾಲವನ್ನು ನಮೂದಿಸುವುದರಲ್ಲಿ ತಪ್ಪಿದ್ದು ಅದು ೧೦೬೧ (ಕ್ರಿ ಶ ೧೧೩೯) ಆಗುವುದಾದಲ್ಲಿ, ಅಂದು ಚಾಲುಕ್ಯ ವಿಕ್ರಮಾದಿತ್ಯ (VI)ನ ಮಗನಾದ ಮುಮ್ಮಡಿ ಸೋಮೇಶ್ವರನು ಆಳುತ್ತಿದ್ದನೇ ಹೊರತು ವಿಕ್ರಮಾದಿತ್ಯನಲ್ಲ ಸೋಮೇಶ್ವರನಿಗೂ ತ್ರಿಭುವನಮಲ್ಲನೆಂಬ ಬಿರುದಿದ್ದಿತೆಂದು ಭಾವಿಸಬೇಕಾಗುತ್ತದೆ ಈ ವಿಷಯದಲ್ಲಿ ಖಚಿತವಾಗಿ ಏನನ್ನೂ ಹೇಳಲು ಸದ್ಯದಲ್ಲಿ ಸಾಧ್ಯವಿಲ್ಲ

## ಹೊಯ್ಸಳರು

ಪ್ರಸ್ತುತ ಸಂಪುಟದಲ್ಲಿರುವ ಹೊಯ್ಸಳವಂಶದ ಅರಸರ ಶಾಸನಗಳು ರಾಜಕೀಯ ಘಟನೆಗಳ ಮೇಲೆ ಹೆಚ್ಚಿನ ಯಾವ ಬೆಳಕನ್ನೂ ಬೀರುವುದಿಲ್ಲ ಹೊಯ್ಸಳರ ವಿಷ್ಣುವರ್ಧನನು ಚಾಲುಕ್ಯ ಅರಸನಾದ ಆರ್ಮಡಿ ವಿಕ್ರಮಾದಿತ್ಯನನ್ನು ಕಣ್ಣೆಗಾಲದಲ್ಲಿ ಸೋಲಿಸಿದನೆಂಬುದು ಬಹಳ ಪ್ರಮುಖವಾಗಿ ಹೇಳಲಾದ ಘಟನೆ ಮಾಂಡಲಿಕನಾಗಿದ್ದ ಈ ಹೊಯ್ಸಳನು ವಿಕ್ರಮಾದಿತ್ಯನ ಆಳಿಕೆಯ ಅಂತಿಮ ವರ್ಷಗಳಲ್ಲಿ ಬಂಡೆದ್ದು ಸ್ವಾತಂತ್ರ್ಯಘೋಷಣೆ ಮಾಡಲು ಹವಣಿಸಿದನು ಈ ಸಂದರ್ಭದಲ್ಲಿ ಕ್ರಿ ಶ ೧೧೧೭–೧೮ರಲ್ಲಿ ನಡೆದ ಕದನದಲ್ಲಿ ಚಾಲುಕ್ಯರ ಸೇನೆಯನ್ನು ಸೋಲಿಸಿದನು ಈ ಕದನಗಳಲ್ಲಿ ಈತನ ದಂಡನಾಯಕನಾಗಿದ್ದ ಗಂಗರಾಜನು ಮಹತ್ವದ ಪಾತ್ರವನ್ನು ವಹಿಸಿದ್ದನು ಇದರಿಂದ ಈ ಗಂಗರಾಜನ ಯಶೋದುಂದುಭಿ ಮೊಳಗಿದಂತಾಗಿ, ಹಾನುಗಲ್ಲಿನ ಕದಂಬರನ್ನು ಸೋಲಿಸಿ ಅಲ್ಲಿಂದ ಮುಂದುವರಿದು ತುಂಗಭದ್ರೆಯನ್ನು ದಾಟಿ ಕುಮ್ಮಟದ ಕೋಟೆಯನ್ನು ಸಹ ಈತನು ವಶಪಡಿಸಿಕೊಂಡನು ಆ ನಂತರದ ಘಟನೆಗಳೊಡನೆ ನಮಗೆ ಪ್ರಸ್ತುತ ಸಂಬಂಧವಿಲ್ಲ ಈ ಸಂಪುಟದಲ್ಲಿ ದಂಡನಾಯಕ ಗಂಗರಾಜನ ಈ ಸಾಧನೆಗಳಿಂದ ಸಂತುಷ್ಟಿಗೊಂಡು ಪರಮ ಎಂಬ ಗ್ರಾಮವನ್ನು ಅರಸನು ಆತನಿಗೆ ದಾನವಾಗಿ ಕೊಟ್ಟನು ಆ ಗ್ರಾಮ ಆತನಿಂದ ಶ್ರವಣಬೆಳಗೊಳದ ಬಸದಿಗಳಿಗೆ ಪುನರ್ದತ್ತಿಮಾಡಲ್ಪಟ್ಟಿತು ಎಂಬುದಷ್ಟು ಇಲ್ಲಿ ತಿಳಿಯಬೇಕಾದ ವಿಷಯ

ಶಾಸನಗಳಿಂದ ಗಂಗರಾಜನ ಮನೆತನಕ್ಕೆ ಸೇರಿದ ಹಲವಾರು ವಿವರಗಳು ತಿಳಿದುಬಂದಿವೆ ಅವನ ವಂಶಾವಳಿಯನ್ನು ಹೀಗೆ ರೂಪಿಸಬಹುದು




೧೩೫ನೆಯ ಶಾಸನದಲ್ಲಿ ಗಂಗರಾಜನ ಅತ್ತಿಗೆಯ ಪ್ರಶಂಸೆ ಇದೆ ೫೦೩ ಮತ್ತು ೬೦೪ನೆಯ ಶಾಸನಗಳಿಂದ ಈ ಜಕ್ಕಣಬ್ಬೆಗೆ ಬೊಪ್ಪದೇವನೆಂಬೊಬ್ಬ ಮಗನಿದ್ದನೆಂದು, ಮೋಕ್ಷತಿಲಕವೆಂಬ ವ್ರತವನ್ನು ನೋನ್ತು ಈಕೆ ನಯಣದೇವರನ್ನು ಮಾಡಿಸಿದಳೆಂದು ಹೇಳಿದೆ ೫೫೦ನೆಯ ಶಾಸನದಲ್ಲಿ ಈಕೆಯನ್ನು ದಂಡನಾಯಕಿತಿ ಎಂದು ಕರೆದಿದೆ ಈಕೆಯ ಪತಿಯ ಹೆಸರನ್ನು ಎಲ್ಲಿಯೂ ಹೇಳಿಲ್ಲ ಗಂಗರಾಜನ ಅಣ್ಣನೊಬ್ಬ ಬಮ್ಮಣಯ್ಯನೆಂಬುದು ತಿಳಿದಿದೆ ಆತನ ಪತ್ನಿ ಬಾಗಣಬ್ಬೆ ಆದರೆ ಜಕ್ಕಣಬ್ಬೆ ಆತನ ಇನ್ನೊಬ್ಬ ಪತ್ನಿಯೋ, ಅಥವಾ ಗಂಗರಾಜನ ಇನ್ನೊಬ್ಬ ಅಣ್ಣನ ಪತ್ನಿಯೋ ಎಂದು ಖಚಿತವಾಗಿ ತಿಳಿಯದಾಗಿದೆ ಗಂಗರಾಜನ ಮಗನಾದ ಬೊಪ್ಪನು ನಾಗಲದೇವಿಯ ಮಗ ಲಕ್ಷ್ಮಿ ಎಂಬುವವಳು ಆತನ ಇನ್ನೊಬ್ಬ ಪತ್ನಿ

ಏಚ ಅಥವಾ ಏಚಿರಾಜ (I)ನ ಪತ್ನಿಯಾದ ಪೋಚಿಕಬ್ಬೆಯೂ, ಆಕೆಯ ಸೊಸೆ ಲಕ್ಷ್ಮಿಯೂ ಜಿನಾಲಯವೊಂದನ್ನು ಕಟ್ಟಿಸಿದರೆಂದು ಹೇಳಿದೆ (ಶಾಸನ ೮೨) ಇದು ಶಾಸನಬಸದಿಯಾಗಿರಬಹುದು ಗಂಗರಾಜನ ಪತ್ನಿಯಾದ ಈಕೆಯನ್ನು ದಂಡನಾಯಕಿತಿ ಲಕ್ಕಲೆ ಎಂದು ಕರೆಯಲಾಗಿದೆ ಈಕೆಯು ನಾಗಲೆಯ ಮಗಳು ಕ್ರಿ ಶ ೧೧೦೩ರಲ್ಲಿ ಈಕೆಯ ಸೋದರನಾದ ಬೂಚಿರಾಜ(ಬೂಚಣ)ನು ನಿಧನಹೊಂದಿದಾಗ ಅವನ ನೆನಪಿನಲ್ಲಿ ನಿಶಿದಿಯೊಂದನ್ನು ಈಕೆ ನೆಲೆಗೊಳಿಸಿದಳು (೧೫೫ನೆಯ ಶಾಸನ,) ಎರಡುವರ್ಷಗಳ ನಂತರ, ೧೧೧೫ರಲ್ಲಿ, ಈಕೆಯ ಗುರುವಾದ ಪ್ರಭಾಚಂದ್ರಸಿದ್ಧಾಂತದೇವರ ಗುರುಗಳಾದ ಮೇಘಚಂದ್ರ ತ್ರೈವಿದ್ಯದೇವರು ದಿವಂಗತರಾದರು (೧೫೬) ೧೧೨೦ರಲ್ಲಿ ಈಕೆಯ ಹಿರಿಯ ಸೋದರಿಯೂ, ಚಾಮುಂಡನೆಂಬ ರಾಜಶ್ರೇಷ್ಠಿಯ ಪತ್ನಿಯೂ ಆದ ದೇಮವ್ವೆ ಸಂನ್ಯಾಸನ ವಿಧಿಯಿಂ ಮುಡಿಪಿದಳು (೧೫೮) ಒಂದಾದ ಬಳಿಕ ಒಂದರಂತೆ ಈಕೆಯ ಮನೆತನದಲ್ಲಿನ ಈ ವಿಯೋಗಗಳ ಬಳಿಕ ಈಕೆಯೇ ೧೧೨೧ ಅಥವಾ ೧೧೨೨ರಲ್ಲಿ ಸಮಾಧಿವೆರಸಿ ದೇವಲೋಕಕ್ಕೆ ಸಂದಳು (೧೫೭) ಎರಡುಕಟ್ಟೆ ಬಸದಿಯಲ್ಲಿನ ಆದೀಶ್ವರಸ್ವಾಮಿಯ ಸಿಂಹಪೀಠದಲ್ಲಿನ ಶಾಸನದಲ್ಲಿ (೧೬೦) ಈಕೆ ನೂತನ ಬಸದಿಯೊಂದನ್ನು ಕಟ್ಟಿಸಿದಳೆಂದು ಹೇಳಿದೆ ಆ ಬಸದಿ ಯಾವುದೆಂಬುದು ತಿಳಿಯದು

ಚಂದ್ರಮೌಳಿ ಈ ಶಾಸನಗಳಲ್ಲಿ ಕಾಣಿಸಿಕೊಳ್ಳುವ ಇನ್ನೊಬ್ಬ ಮಂತ್ರಿ (ಶಾಸನ ೪೪೪, ೫೭೧) ಈತನು ಶಿವಭಕ್ತ, 'ತನಗಾರಾಧ್ಯಂ ಹರಂ' ಎಂದುಕೊಂಡಿದ್ದಾನೆ (ಶಾಸನ ೪೪೪) ಆದರೆ ಶ್ರವಣಬೆಳಗೊಳದ ಅಕ್ಕನ ಬಸದಿಯನ್ನು ಕಟ್ಟಿಸಿದಾಕೆ ಈತನ ಪತ್ನಿಯಾದ ಆಚಲದೇವಿ ಆಕೆಯ ಮನೆತನದ ವಿವರಗಳನ್ನು ಶಾಸನದಲ್ಲಿ ಕೊಟ್ಟಿದೆ

ಚಂದ್ರಮೌಳಿಯ ತಂದೆ ಶಂಭುದೇವ, ತಾಯಿ ಅಕ್ಕವ್ವೆ ಆಚಲದೇವಿಯ ಹಿರಿಯ ಅತ್ತಿಗೆಯಾದ ದೋಚವ್ವೆಯು ಮಲ್ಲಿಸೆಟ್ಟಿ ಮತ್ತು ಮಾಚವೆಸೆಟ್ಟಿಕವ್ವೆಯರ ಮಗಳು ಪತಿ ಶಿವಭಕ್ತನಾದರೂ ಜಿನಭಕ್ತೆಯಾದ ಆಚಲದೇವಿಗೆ ತನ್ನ ಧರ್ಮವನ್ನು ಅವಲಂಬಿಸಲು ಅನುಕೂಲಮಾಡಿಕೊಟ್ಟ ಚಂದ್ರಮೌಳಿಯ ಆಚರಣೆ ಶ್ಲಾಘನೀಯವಾಗಿದೆ






ವಿಷ್ಣುವರ್ಧನನ ಪ್ರಸಿದ್ಧರಾಣಿಯಾದ ಶಾಂತಲದೇವಿಯ ಉಲ್ಲೇಖ ಈ ಸಂಪುಟದ ಶಾಸನಗಳಲ್ಲಿದೆ (೧೬೧, ೧೬೩, ೧೭೩, ೧೭೪, ೧೭೬ನೆಯ ಶಾಸನಗಳು) ಸವತಿಗಂಧವಾರಣ ಬಸದಿಯನ್ನು ಕಟ್ಟಿಸಿ ಅದಕ್ಕೆ ಕಲ್ಕಣಿನಾಡಿನಲ್ಲಿನ ಮೊಟ್ಟೆನವಿಲೆ ಎಂಬ ಗ್ರಾಮವನ್ನು ದತ್ತಿಯಾಗಿ ಬಿಟ್ಟು, ಅದನ್ನು ಮೇಘಚಂದ್ರತ್ರೈವಿದ್ಯದೇವರ ಶಿಷ್ಯರಾದ ಪ್ರಭಾಚಂದ್ರಸಿದ್ಧಾಂತದೇವರಿಗೆ ಆಕೆ ಧಾರೆಯನ್ನೆರೆದಿದ್ದಾಳೆ ಗಂಗರಾಜನ ಪತ್ನಿಯಾದ ಲಕ್ಷ್ಮೀಮತಿ ಸಹ ಮೇಘಚಂದ್ರತ್ರೈವಿದ್ಯದೇವರ ಶಿಷ್ಯೆ ಎಂಬುದನ್ನು ಗಮನಿಸಬೇಕು ಶಾಂತಲೆಯ ಮನೆತನದ ವಿವರ ಇಂತಿದೆ




ಶಾಂತಲದೇವಿಯು ೧೧೩೧ರಲ್ಲಿ ಶಿವಗಂಗೆಯಲ್ಲಿ ಮರಣಹೊಂದಿದಳು ಈ ಸಮಾಚಾರವನ್ನರಿತ ಆಕೆಯ ತಾಯಿ ಮಾಚಿಕಬ್ಬೆಯು ಒಂದು ತಿಂಗಳಕಾಲ ಸನ್ಯಸನ ವ್ರತವನ್ನು ಕೈಗೊಂಡು ಪಂಡಿತಮರಣವನ್ನೈದಿದಳು ಈ ವಂಶದಲ್ಲಿಯೂ ನಾವು ಧರ್ಮಸಹಿಷ್ಣುತೆಯನ್ನು ಕಾಣುತ್ತೇವೆ ಶಾಂತಲೆಯ ತಂದೆಯಾದ ಪೆರ್ಗ್ಗಡೆ ಮಾರಸಿಂಗಯ್ಯನು ಶೈವಮತಾನುಯಾಯಿ ಆದರೆ ಆತನ ಪತ್ನಿಯಾದ ಮಾಚಿಕಬ್ಬೆಯು ಜಿನಭಕ್ತೆ

ಈ ಶಾಸನಗಳಲ್ಲಿ ಕಾಣಿಸಿಕೊಳ್ಳುವ ಇನ್ನೊಬ್ಬ ಹಿರಿಯ ಅಧಿಕಾರಿ ದಂಡನಾಯಕ ಹುಳ್ಳ–ಹುಳ್ಳರಸ ಸವಣೇಱು, ಬೆಕ್ಕ ಮತ್ತು ಕೆಗ್ಗೆಱೆ[3] ಗ್ರಾಮಗಳನ್ನು ಗೊಮ್ಮಟೇಶ್ವರನಿಗೆ ದತ್ತಿಯಾಗಿ ಬಿಟ್ಟ ಹಿರಿಯ ದಾನಿ ಇವುಗಳನ್ನು ಈತನು ಹೊಯ್ಸಳ ನರಸಿಂಹದೇವ (I)ನಿಂದ ಪಡೆದನು ಈತನ ಗುರು ನಯಕೀರ್ತ್ತಿಸಿದ್ಧಾಂತದೇವ ೭೭ನೆಯ ಶಾಸನದಿಂದ ಈತನ ಪತ್ನಿಯ ಹೆಸರು ಪದ್ಮಾವತಿ ಎಂದು ತಿಳಿದುಬರುತ್ತದೆ ವಾಜಿವಂಶಕ್ಕೆ ಸೇರಿದ ಈತನು ಯಕ್ಷರಾಜನ ಪುತ್ರ, ತಾಯಿ ಲೋಕಾಂಬಿಕೆ ಅಜ್ಜ ಚಂದಿರಾಜ (೫೬೪), ಮಗ ನರಸಿಂಹ (೫೬೫) ಬಂಕಾಪುರದಲ್ಲಿನ ಮಹಾಜಿನೇಂದ್ರಾಲಯವನ್ನೊಳಗೊಂಡು ಅನೇಕ ಬಸದಿಗಳನ್ನು ಈತನು ಜೀರ್ಣೋದ್ಧಾರಗೊಳಿಸಿದನು (೪೭೬) ಬಂಕಾಪುರದಲ್ಲಿ ಧೋರ ಜಿನಾಲಯವೆಂಬುದೊಂದಿದ್ದಿತೆಂಬುದು ನಮಗೆ ಅಸುಂಡಿಯ ಶಾಸನದಿಂದ ತಿಳಿದಿದೆ[1] ಹುಳ್ಳನು ದುರಸ್ತಿಗೊಳಿಸಿದುದು ಇದೇ ಆಗಿರಬಹುದು ಕಲಿವಿಟಸೆಂಬಾತನ ಜಿನಾಲಯವನ್ನು ಈತನು ಸರಿಗೊಳಿಸಿದನೆಂದು ಹೇಳಿದೆ ಈ ಕಲಿವಿಟನು ರಾಷ್ಟ್ರಕೂಟ ಮುಮ್ಮಡಿಕೃಷ್ಣನ ಅಧೀನನಾಗಿ ಬನವಾಸಿ ಪ್ರಾಂತವನ್ನಾಳುತ್ತಿದ್ದ ಚೆಲ್ಲಕೇತನ ಮನೆತನದ ಕಲಿವಿಟನಾಗಿರಬಹುದು[2] ಅಂತೆಯೇ ಕೆಲ್ಲಂಗೆಱೆಯಲ್ಲಿನ ಆದಿತೀರ್ತ್ಥವೆನಿಸಿದ ಗಂಗರಿಂದ ಕಟ್ಟಲ್ಪಟ್ಟ ಜಿನಾಗಾರವನ್ನೂ ಸಹ ಹುಳ್ಳನು ಆಕಲ್ಪಸ್ಥಿರಮಾಗಿ ಮಾಡಿಸಿದನು ೫೭೩ನೆಯ ಶಾಸನದಲ್ಲಿ ಈತನ ಮಯ್ದುನ ಅಶ್ವಾಧ್ಯಕ್ಷದ ಹೆಗ್ಗಡೆ ಹರಿಯಣ್ಣನ ಉಲ್ಲೇಖವಿದೆ

1 *S I I*, Vol XI pt I, No 34

2 *Bomb Gaz*, Vol I, pt II, pp 420

೧೧೭೬ನೆಯ ವರ್ಷದ ೭೩ನೆಯ ಶಾಸನ ನಯಕೀರ್ತಿದೇವನ ಸ್ಮಾರಕ ನಿಷಿಧಿ ಶಾಸನ ಹುಳ್ಳರಸನ ಅಧೀನಾಧಿಕಾರಿಯಾಗಿ ಸಚಿವನೂ, ಶ್ರೀಕರಣಾಧಿಪನೂ ಆಗಿದ್ದ ನಾಗದೇವನು ಇದನ್ನು ನಿಲ್ಲಿಸಿದನು ಆತನ ವಂಶದ ನಿರೂಪಣೆ ಇದರಲ್ಲಿದೆ




ಚಂದಾಂಬಿಕೆಯು ಪಟ್ಟಣಸ್ವಾಮಿ ಮಲ್ಲಿಸೆಟ್ಟಿ ಹಾಗೂ ಮಾಚವ್ವೆಸೆಟ್ಟಿಕವ್ವೆಯ ಮಗಳು ಚಂದ್ರಪಾಲಿಯ ಪತ್ನಿಯಾದ ಅಚಲದೇವಿಯ ಅತ್ತಿಗೆ ದೋಚವ್ವೆಯ ತಂದೆತಾಯಿಗಳ ಹೆಸರೂ ಇದೇ ಆಗಿರುವುದನ್ನು ಮೇಲೆ ನೋಡಿದ್ದೇವೆ ಎಂದ ಬಳಿಕ ಚಂದಾಂಬಿಕೆಯು ದೋಚವ್ವೆಯ ಸೋದರಿಯಾಗಿರಬಹುದು !

೪೫೫ನೆಯ ಶಾಸನದಲ್ಲಿ ತೇದಿಯನ್ನು ಕೊಟ್ಟಿಲ್ಲ ಇದು ಹೊಯ್ಸಳ ಇಮ್ಮಡಿ ವೀರಬಲ್ಲಾಳದೇವನ ಆಳ್ವಿಕೆಯ ಕಾಲಕ್ಕೆ ಸೇರಬಹುದಾದ ಶಾಸನ ಗೊಮ್ಮಟಪುರದ ನಗರಂಗಳಿಗೆ ಕೊಟ್ಟ ಶಾಸನ ಪತ್ರ್ದಳೆಯ ವಿವರಗಳು ಇದರಲ್ಲಿವೆ ಇದನ್ನು ಹಿರಿಯ ಮಾಣಿಕ್ಯಭಂಡಾರಿ ರಾಮದೇವನಾಯಕನ ಸಂನಿಧಿಯಲ್ಲಿ ಕೊಡಲಾಯಿತು ಈತನು ವೀರಬಲ್ಲಾಳದೇವರ ಕುಮಾರನಾದ ಸೋಮೇಶ್ವರದೇವನ ಪ್ರಧಾನನೆಂದು ಹೇಳಿದೆ ಕ್ರಿ ಶ ೧೨೨೦ರಲ್ಲಿ ಬಲ್ಲಾಳದೇವನ ಮಗ ನರಸಿಂಹ (II)ನು ಪಟ್ಟಕ್ಕೆ ಬಂದನೆಂಬುದು ತಿಳಿದ ವಿಷಯವೇ ಬಲ್ಲಾಳನಿಗೆ ಬೇರಾವ ಮಕ್ಕಳೂ ಇದ್ದುದು ತಿಳಿದಿಲ್ಲ ಆದಕಾರಣ ಈ ಶಾಸನವನ್ನು ಗಮನಿಸಿದ ಫ್ಲೀಟ್‌ರವರು ಶಾಸನಪಾಠದಲ್ಲಿಯೋ ಮೂಲದಲ್ಲಿಯೋ ಏನಾದರೂ ತಪ್ಪಿರಬಹುದೆಂದು ಹೇಳಿ ಕುಮಾರ ಸೋಮೇಶ್ವರನನ್ನು ಪ್ರಸ್ತಾಪಿಸುವ ಇದನ್ನು ಬದಿಗೊತ್ತಿದರು [1] ಆದರೆ ನರಸಿಂಹಾಚಾರ್ಯರು ಸೋಮೇಶ್ವರನೆಂಬೊಬ್ಬನು ಸೌಶೀಲ್ಯದಿಂದ ಬಲ್ಲಾಳದೇವನ ಕುಮಾರನೆಂದು ಕರೆದುಕೊಂಡಿದ್ದಾನೆ ಎಂದರು [2] ಆದರೆ ಈ ಶಾಸನೋಕ್ತ ಹೇಳಿಕೆಯನ್ನು ಇಷ್ಟು ಉದಾಸೀನವಾಗಿ ಕಾಣಲಾಗದು

ಈ ಶಾಸನದಲ್ಲಿ ಉಕ್ತವಾಗಿರುವ ನಯಕೀರ್ತಿದೇವನ ಶಿಷ್ಯರು ಇತರ ತೇದಿಗಳಿರುವ ಶಾಸನಗಳಲ್ಲೂ [3] ಕಂಡುಬರುವ ಆಧಾರದ ಮೇಲೆ ನರಸಿಂಹಾಚಾರ್ಯರು ಈ ಶಾಸನದ ಕಾಲ ಕ್ರಿ ಶ ೧೨೦೬ ಆಗಿರಬಹುದೆಂದು ಭಾವಿಸಿದ್ದಾರೆ ಇಮ್ಮಡಿ ನರಸಿಂಹನು ಕ್ರಿ ಶ ೧೧೮೨ರಲ್ಲಿ ಹುಟ್ಟಿದನೆಂಬುದು ತಿಳಿದಿದೆ [4] ತಂದೆಯೊಂದಿಗೆ ಈತನು ಆಡಳಿತದಲ್ಲಿ ಭಾಗವಹಿಸಿದನೆಂದು ಸೂಚಿಸುವ ಮೊದಲ ಶಾಸನದ ಕಾಲ ೧೨೦೩ [5]

ಈ ಸಂದರ್ಭದಲ್ಲಿ ಧಾರವಾಡಜಿಲ್ಲೆಯ ಹೊಸೂರು ಗ್ರಾಮದಲ್ಲಿನ ಶಾಸನವನ್ನು ಗಮನಿಸಬಹುದು [6] ಈ ಶಾಸನದಲ್ಲಿ ವೀರಬಲ್ಲಾಳನ ಮಗನಾದ ನರಸಿಂಹನನ್ನು 'ದ್ವಿತೀಯಂ ಕುಮಾರಂ' ಎಂದು ಹೇಳಿದೆ ಈತನು ೧೨೦೫ರಲ್ಲಿ (ಕ್ರೋಧನ ಸಂವತ್ಸರ) ಮುಳುಗುಂದ – ೧೨ ರ ಆಡಳಿತದ ಹೊಣೆಯನ್ನು ಹೊತ್ತಿದ್ದನು ಇದರಲ್ಲಿ ಈತನನ್ನು ಎರಡನೆಯ ಮಗನೆಂದು ಕರೆದಿರುವುದೂ, ಚಿಕ್ಕನರಸಿಂಗಯ್ಯನೆಂದಿರುವುದೂ ಗಮನಾರ್ಹವಾಗಿದೆ ಶ್ರವಣಬೆಳಗೊಳದ ೪೫೫ನೆಯ ಶಾಸನದಲ್ಲಿ ಗೊಮ್ಮಟಪುರದಲ್ಲಿ ಮನೆದೆಱೆಯನ್ನು ಕೊಡುವುದಕ್ಕೆ ಸಂಬಂಧಿಸಿದಂತೆ ನಿಯಮಾವಳಿ ರೂಪಿತವಾಗಿದ್ದು, ಅದು ಅಕ್ಷಯ ಸಂವತ್ಸರದಿಂದ ಆಚರಣೆಗೆ ಬರುವಂತೆ ಹೇಳಿದೆ ಎಂದಮೇಲೆ ಈ ಶಾಸನ ಒಂದು ವರ್ಷ ಮೊದಲಿಗೆ, ಬಹುಶಃ ಕ್ರೋಧನ ಸಂವತ್ಸರದಲ್ಲಿಯೇ ಅಸ್ತಿತ್ವಕ್ಕೆ ಬಂದಿರಬಹುದು ಈ ಕ್ರೋಧನ ಸಂವತ್ಸರದಲ್ಲಿ ಚಿಕ್ಕನರಸಿಂಗಯ್ಯನು ಮುಳುಗುಂದದ ಭಾಗವನ್ನಾಳುತ್ತಿದ್ದನೆಂದು

---

1 *Bomba Gaz*, Vol I, pt II, p 502, note 2
2 Introduction, p 62
3 ಈ ಸಂಪುಟದ 444 ಮತ್ತು 457 ನೇ ಶಾಸನಗಳು
4 *E C*, Vol IV, Ng 32
5 *Ibid*, Vol XI, Cd 23
6 *Ep Ind*, Vol XXXII, pp 171 ff

ಮೇಲೆ ಹೇಳಿದೆ ಆದ್ದರಿಂದ ಪ್ರಸ್ತುತ ಶಾಸನದಲ್ಲಿ ಉಕ್ತನಾದ ಕುಮಾರ ಸೋಮೇಶ್ವರದೇವನು ವಾಸ್ತವಿಕವಾಗಿಯೂ ಇಮ್ಮಡಿ ವೀರಬಲ್ಲಾಳದೇವನ ಮಗನೇ ಆಗಿರಬೇಕು ಇದನ್ನು ಒಪ್ಪಿಕೊಂಡಲ್ಲಿ ಇಮ್ಮಡಿ ವೀರಬಲ್ಲಾಳನಿಗೆ ಇನ್ನೊಬ್ಬ ಮಗನಿದ್ದನೆಂದಾಗುತ್ತದೆ ಇದನ್ನು ನಾವು ಈ ಮೊದಲೇ ಸೂಚಿಸಿದ್ದೇವೆ [7]

## ವಿಜಯನಗರ

ವಿಜಯನಗರದ ಅರಸರಿಗೆ ಸಂಬಂಧಿಸಿದ ಐದು ಶಾಸನಗಳು ಈ ಸಂಪುಟದಲ್ಲಿವೆ ಕ್ರಿ ಶ ೧೩೬೮ನೆಯ ಮೊದಲನೆಯ ಬುಕ್ಕರಾಯನ ೪೬೫ನೆಯ ಶಾಸನವನ್ನು ಈಗಾಗಲೇ ಪರಿಶೀಲಿಸಿದ್ದೇವೆ ೪೪೬ನೆಯ ಕ್ರಿ ಶ ೧೪೦೪ನೆಯ ವರ್ಷದ ಶಾಸನ ಆ ವರ್ಷದ ಆಗಸ್ಟ್ ಮಾಹೆಯ ೩೦ರಂದು ಹರಿಹರರಾಯನು ಮರಣಹೊಂದಿದ ವಿಷಯವನ್ನು ತಿಳಿಸುತ್ತದೆ ಈತನು ಇಮ್ಮಡಿ ಹರಿಹರರಾಯನೆಂದು ಗುರುತಿಸಲಾಗಿದೆ

೧೪೨೨ನೆಯ ವರ್ಷದ ೩೫೬ನೆಯ ಶಾಸನ ಗೊಮ್ಮಟೇಶ್ವರದೇವರ ಸನಾತನಭೋಗಕ್ಕೆಂದು ಇರುಗಪ ದಂಡನಾಥ ಬೆಳಗುಳಗ್ರಾಮವನ್ನು ದಾನಮಾಡಿದ ವಿಷಯವನ್ನೊಳಗೊಂಡಿದೆ ಇರುಗವನ ವಂಶಾವಳಿ ಇದರಲ್ಲಿ ಹೇಳಿದೆ




ಈ ಶಾಸನ ಸಂಸ್ಕೃತ ಭಾಷೆಯಲ್ಲಿದೆ

೪೪೫ನೆಯ ಶಾಸನದಿಂದ ಇಮ್ಮಡಿ ದೇವರಾಯನು ೧೪೪೬ನೆಯ ವರ್ಷದ ಮೇ ೨೪ರಂದು ದಿವಂಗತನಾದನೆಂದು ತಿಳಿದುಬರುತ್ತದೆ ಇದೇ ಶಾಸನದ ಅಪೂರ್ಣಪ್ರತಿಯನ್ನು ನಂ ೪೪೬ರಲ್ಲಿ ಕಾಣುತ್ತೇವೆ

೪೬೬ನೆಯ ಕ್ರಿ ಶ ೧೫ನೆಯ ಶತಮಾನಕ್ಕೆ ಸೇರಿದ ಶಾಸನದಲ್ಲಿ ದೇವರಾಯ ಮಹಾರಾಯರ ರಾಣಿ ಭೀಮಾದೇವಿಯು ಶಾಂತಿನಾಥಸ್ವಾಮಿಯನ್ನು ಮಾಡಿಸಿದಳೆಂದು ಹೇಳಿದೆ ಇದರಲ್ಲಿ ಉಕ್ತನಾದ ದೇವರಾಯನು ಮೊದಲನೆಯವನೋ ಎರಡನೆಯವನೋ ಹೇಳಲಾಗದು ಶ್ರೀ ನರಸಿಂಹಾಚಾರ್ಯರು ಆಕೆಯ ಗುರುವಾದ ಪಂಡಿತಾರ್ಯನ ಉಲ್ಲೇಖವಿರುವುದರಿಂದಲೂ ಆತನು ಇತರ ಶಾಸನಗಳಿಂದ ತಿಳಿದುಬಂದಿರುವುದರಿಂದಲೂ ಆಕೆ ಮೊದಲನೆಯ ದೇವರಾಯನ ಪತ್ನಿಯೆಂದು ಊಹಿಸಿದ್ದಾರೆ [1]

## ಮೈಸೂರು ಅರಸರು

ಕ್ರಿ ಶ ೧೬೩೪ನೆಯ ವರ್ಷದ ೩೫೨ನೆಯ ಶಾಸನ ಮೈಸೂರಿನ ಅರಸರಾದ ಚಾಮರಾಜವೊಡೆಯ (VII)ರದು ಗೊಮ್ಮಟೇಶ್ವರಾಲಯಕ್ಕೆ ಸೇರಿದ್ದ ಭೂಮಿಗಳನ್ನು ಅನೇಕರು ಅಡಮಾನಕ್ಕೆ ಹಾಕಿಕೊಂಡಿದ್ದರು ಅರಸರು ಶ್ರವಣಬೆಳಗೊಳಕ್ಕೆ ಬಂದಿರಬಹುದಾದ ಆ ಸಂದರ್ಭದಲ್ಲಿ ಈ ವಿಷಯವನ್ನು ಅರಿತು ತಾವೇ ಸ್ವತಃ ಅಡವಿನ ಸಾಲವನ್ನು ತೀರಿಸಲು ಮುಂದೆ ಬಂದು ಸಾಲ ಕೊಟ್ಟವರನ್ನು ಕರೆಸಿ ತಮ್ಮ ಇಚ್ಛೆಯನ್ನು ವ್ಯಕ್ತಪಡಿಸಿದಾಗ, ಅವರು ಅದಕ್ಕೆ ಅಸ್ಪದ ಕೊಡದೆ ತಾವೇ ಆ ಭೂಮಿಗಳನ್ನು ಮುಕ್ತಮಾಡುವುದಾಗಿಯೂ, ಇದರಿಂದ ತಂಮ ತಾಯಿತಂದೆಗಳಿಗೆ ಪುಣ್ಯ ಬರುವಂತಾಗಲೆಂದೂ ಹೇಳಿ, ಭೂಮಿಗಳನ್ನು ಬಿಡಿಸಿದರೆಂದು ಶಾಸನ ತಿಳಿಸುತ್ತದೆ ಭೂಮಿಗಳನ್ನು ಅಡವುಹಾಕಿಕೊಂಡವರಲ್ಲಿ ಪಂಚಬಾಣಕವಿಗಳ ಮಗ ಬೊಂಮ್ಮಯ್ಯಪ್ಪ ಮತ್ತು ಬೊಂಮಣಕವಿಗಳೂ ಇಬ್ಬರು ಆದರೆ ಇವರು ಕವಿಗಳಾಗಿದ್ದಲ್ಲಿ ಇವರುಗಳನ್ನು ಕುರಿತು ಇತರ ವಿವರಗಳೇನೂ ತಿಳಿಯದು ೪೯೫ನೆಯ ಶಾಸನ ಇದೇ ಶಾಸನದ ವಿವರಗಳನ್ನೊಳಗೊಂಡ ತಾಮ್ರಶಾಸನ ಆದರೆ ಇದರಲ್ಲಿ ಮೇಲ್ಕಂಡ ಶಾಸನದಲ್ಲಿ ಹೇಳಿದಂತೆ

---

[7] ವಿವರಗಳಿಗೆ *Ibid*

[1] Introduction, p 64

ಭೂಮಿಗಳನ್ನು ಅಡವಿಟ್ಟುಕೊಂಡವರ ಹೆಸರುಗಳನ್ನು ಹೇಳಿಲ್ಲ ಆದರೆ ಇದರಲ್ಲಿ ಇನ್ನು ಮುಂದೆ 'ಬೆಳುಗುಳದ ಸ್ಥಾನದವರು ಸ್ವಾಸ್ತಿಯನ್ನು ಅವನಾನೊಬ್ಬನು ಅಡಹು ಹಿಡಿದಂತವರು ಅಡವಕೊಟಂತವರು ಧರುಶನ ದರ್ಮಕೆ ಹೊರಗು' ಎಂದು ಕಟ್ಟುಪಾಡನ್ನು ಸೂಚಿಸಿದೆ ಯಾವ ಪರಿಸ್ಥಿತಿಯಲ್ಲಿ ಭೂಮಿಯನ್ನು ಅಡವು ಹಾಕಿಕೊಂಡರೆಂಬುದು ತಿಳಿಯದಿದ್ದರೂ ದೇವಾಲಯದ ಅಧಿಕಾರವರ್ಗದವರು ದೈವನಿಧಿಯನ್ನು ದುರುಪಯೋಗಪಡಿಸಿಕೊಂಡರೆಂಬುದು ಇದರಿಂದ ಸ್ಪಷ್ಟವಾಗುತ್ತದೆ ಇದನ್ನು ತಿಳಿದೂ ಅರಸನು ಇವರ ವಿರುದ್ಧ ಯಾವ ಕ್ರಮವನ್ನೂ ಕೈಗೊಳ್ಳದಿದ್ದುದು ಆಶ್ಚರ್ಯ ಇದು ಅರಸನಿಗೆ ಇಂತಹ ನಿಧಿಗಳ ಆಡಳಿತ ವ್ಯವಹಾರಗಳಲ್ಲಿ ಕೈಹಾಕುವ ಅಧಿಕಾರ ಬಹುಶಃ ಇರಲಿಲ್ಲವೆಂಬುದನ್ನು ಸೂಚಿಸುತ್ತದೆ

ಈ ಶಾಸನವನ್ನು ಕುರಿತು ಬರೆಯುವ ಸಂದರ್ಭದಲ್ಲಿ ಶ್ರೀ ನರಸಿಂಹಾಚಾರ್ಯರು ಸುಮಾರು ಕ್ರಿ ಶ ೧೬೮೦ರಲ್ಲಿ ಚಿದಾನಂದಕವಿಯಿಂದ ರಚಿತವಾದ 'ಮುನಿವಂಶಾಭ್ಯುದಯ' ವೆಂಬ ಸಾಹಿತ್ಯಕೃತಿಯನ್ನು ಉಲ್ಲೇಖಿಸಿದ್ದಾರೆ[1] ಇದರಲ್ಲಿ ಅರಸರು ಶ್ರವಣಬೆಳಗೊಳಕ್ಕೆ ಭೇಟಿನೀಡಿದಾಗ, ಅಲ್ಲಿನ ಬಸದಿಯ ಗುರುಗಳು ಎಲ್ಲಿರುವರೆಂದು ವಿಚಾರಿಸಲಾಗಿ ಕವಿ ಬೊಮ್ಮಣನು ತೆಲುಗು ನಾಯಕನಾದ ಜಗದೇವನು ಕೊಡುತ್ತಿದ್ದ ತೊಂದರೆಗಳನ್ನು ತಾಳಲಾರದೆ ಗುರುವಾದ ಚಾರುಕೀರ್ತಿಯು ಆ ಸ್ಥಳವನ್ನೇ ಬಿಟ್ಟುದಾಗಿಯೂ ಅದರ ಪರಿಣಾಮವಾಗಿ ಗೊಮ್ಮಟೇಶ್ವರನ ಪೂಜೆ ನಿಂತಿರುವುದೆಂದೂ ತಿಳಿಸಿದನಂತೆ ರಾಜನು ಗುರುವನ್ನು ಪುನಃ ಹಿಂದಕ್ಕೆ ಬರಮಾಡಿಕೊಂಡು ಪೂಜೆಪುನಸ್ಕಾರಗಳಿಗಾಗಿ ದತ್ತಿಗಳನ್ನು ನೀಡಿದನೆಂಬ ನಂತರದ ಕತೆ ಇಲ್ಲಿ ಅಪ್ರಸ್ತುತ ಆದರೆ ಈ ಘಟನೆ ಶಾಸನೋಕ್ತ ವಿಷಯಕ್ಕೆ ಸಂಬಂಧಿಸಿದುದೇ ಆದಲ್ಲಿ ಈ ಕೃತಿಯಲ್ಲಿ ಸತ್ಯವನ್ನು ಮರೆಮಾಚುವ ಪ್ರಯತ್ನ ನಡೆದಿದೆ ಎಂಬುದು ಸ್ಪಷ್ಟ ಸಮಕಾಲೀನ ಶಾಸನದಲ್ಲಿನ ಹೇಳಿಕೆ ಹೆಚ್ಚಿನಮಟ್ಟಿಗೆ ನಂಬಲರ್ಹವಾಗಿದೆ ಇಲ್ಲಿ ಹೇಳಲ್ಪಟ್ಟ ಕವಿ ಬೊಮ್ಮಣನೇ ಶಾಸನದಲ್ಲಿ ಕಾಣಿಸಿಕೊಳ್ಳುವ ಬೊಂಮಣಕವಿ ಎಂಬುದು ಸ್ಪಷ್ಟ

೫೫೧ನೆಯ ಕ್ರಿ ಶ ೧೬೭೩ನೆಯ ವರ್ಷದ ಶಾಸನ ದೇವರಾಜಯ (ದೊಡ್ಡದೇವರಾಜವೊಡೆಯ)ನ ಶಾಸನ ಬ್ರಾಹ್ಮಣರಿಗೆ ಅನ್ನಸತ್ರಕ್ಕೆ ಮಾಡಿದ ಏರ್ಪಾಡನ್ನು ತಿಳಿಸುತ್ತದೆ ಜೈನದರ್ಮಕ್ಕೆ ಸಂಬಂಧಿಸದ ಕೆಲವೇ ಶಾಸನಗಳಲ್ಲಿ ಇದೊಂದು

ಚಿಕ್ಕದೇವರಾಜೇಂದ್ರ ಮಹಾಸ್ವಾಮಿಯವರು ಹೊಸದಾಗಿ ಕಟ್ಟಿಸದಿದ್ದರೂ ದುರಸ್ತಿಗೊಳಿಸಿದ ಅಥವಾ ವಿಸ್ತರಿಸಿದ ಕಲ್ಯಾಣಿಯನ್ನು ಉಲ್ಲೇಖಿಸುವ ೫೬೧ನೆಯ ಶಾಸನವನ್ನು ಈ ಮೊದಲೇ ಪ್ರಸ್ತಾಪಿಸಿದ್ದೇವೆ ೧೭೨೩ನೆಯ ವರ್ಷದ ದೊಡ್ಡ ಕೃಷ್ಣರಾಜಒಡೆಯರ ಶಾಸನ (೩೫೧)ದಲ್ಲಿ ಇದನ್ನು ಚಿಗದೇವರಾಜಕಲ್ಯಾಣಿ ಎಂದು ಕರೆಯಲಾಗಿದೆ ಈ ಅರಸನು ಬೆಳಗುಳಕ್ಕೆ ಬಂದಿದ್ದ ಅವಸರದಲ್ಲಿ ಗೊಮ್ಮಟೇಶ್ವರನ ಪೂಜೆಗೆಂದು ಕಸಬೆ ಬೆಳುಗುಳ ಹಾಗೂ ಇತರ ಎಂಟು ಗ್ರಾಮಗಳನ್ನು ದತ್ತಿ ನೀಡಿದನು ಅಂತೆಯೇ ಕಲ್ಯಾಣಿಯ ಬಳಿಯ ಅನ್ನಸತ್ರವನ್ನು ನಡೆಸಿಕೊಂಡು ಹೋಗಲೆಂದು ಕಬಾಳೆ ಗ್ರಾಮವನ್ನು ಸಹ ದಾನಮಾಡಿದನು ೫೫೧ನೆಯ ಶಾಸನದಲ್ಲಿ ಕಂಡುಬರುವ ಬ್ರಾಹ್ಮಣರ ಅನ್ನಸತ್ರವು ಇದೇ ಆಗಿರಬಹುದೆಂದು ಖಚಿತವಾಗಿ ಹೇಳಲಾಗದು

೩೭೮ನೆಯ ಶಾಸನ ಕೃಷ್ಣರಾಜವಡೆಯರ(III)ದ್ದು ಇದರ ಕಾಲ ಕ್ರಿ ಶ ೧೮೨೫ "ಭಾಂಗಾಟು ಕಂದಾಚಾರ ಸವಾರಕಚೇರಿ ಯಿಲಾಖೆ"ಯಲ್ಲಿ ಭಕ್ಷಿಯಾಗಿದ್ದ ದೇವರಾಜೈಅರಸಿನವರು ಬಾಹುಬಲಿಯ ಮಸ್ತಕಾಭಿಷೇಕ ಮಹೋತ್ಸವದ ದಿವಸ ಸ್ವರ್ಗಸ್ಥರಾದರು ಅವರ ಸ್ಮರಣೆಗಾಗಿ ವರ್ಷಂಪ್ರತಿ ಆ ದಿನದಂದು ಗೋಮಟೇಶ್ವರಸ್ವಾಮಿಗೆ ವಿಶೇಷಪೂಜೆ ಸಲ್ಲಬೇಕೆಂದು ಅವರ ಮಗ ಪುಟ್ಟದೇವರಾಜೈ ಅರಸಿನವರು ೧೦೦ ವರಹದ ಪುದುವಟ್ಟೊಂದನ್ನು ನೆಲೆಗೊಳಿಸಿದರೆಂದು ಶಾಸನ ತಿಳಿಸುತ್ತದೆ ಚಾವುಂಡರಾಜವಂಶಕ್ಕೆ ಸೇರಿದ ಈ ಅಧಿಕಾರಿಯ ವಂಶಾವಳಿಯನ್ನು ಶಾಸನದಲ್ಲಿ ನಿರೂಪಿಸಿದೆ

ಬಿಳಿಕೆರೆ ಅನಂತರಾಜೈ ಅರಸು

|

ತೋಟದ ದೇವರಾಜೈ ಅರಸು

|

ಸತ್ಯಮಂಗಲದ ಚಲುವೈ ಅರಸು

|

ಭಕ್ಷಿ ದೇವರಾಜೈ ಅರಸು

|

ಪುಟ್ಟದೇವರಾಜೈ ಅರಸು

ಈ ಮನೆತನದ ಮೂಲಪುರುಷ ಚಾಮುಂಡರಾಜನೆಂದು ಹೇಳಿ ಇದರ ಮೂಲವನ್ನು ೧೦ನೆಯ ಶತಮಾನದವರೆಗೂ ಹಿಂದಕ್ಕೆ

---

[1] *Ibid*, p 65

ಒಯ್ಯಲಾಗಿದೆ ಅನಂತರಾಜ್ಯೆ ಅರಸಿನವರು ಬಿಳಿಕೆರೆಯವರಾಗಿದ್ದರೆ, ಚಲುವೈ ಅರಸು ಸತ್ಯಮಂಗಲದವರೆಂದಿದೆ ಬಹುಶಃ ಭಕ್ಷಿ ದೇವರಾಜ್ಯೆ ಅರಸಿನವರ ಕಾಲಕ್ಕೆ ಇವರು ಹಿರಿಯ ಅಧಿಕಾರದ ಸೂತ್ರಗಳನ್ನು ವಹಿಸಿದಂತೆ ತೋರುತ್ತದೆ ಈ ವೇಳೆಗೆ ಅನೇಕ ಪರ್ಷಿಯನ್ ಪದಗಳು ಇಲ್ಲಿ ರೂಢಿಗೆ ಬಂದಿದ್ದಲ್ಲದೆ 'ಭಕ್ಷಿ' ಮುಂತಾದ ಮೊಘಲರ ಕಾಲದ ಅಧಿಕಾರನಾಮಗಳು ಇಲ್ಲಿ ಈಗ ಉಪಯೋಗಿಸಲ್ಪಡುತ್ತಿತ್ತೆಂಬುದು ಗಮನಾರ್ಹವಾಗಿದೆ

## ಚಂಗಾಳ್ವ

ದೊಡ್ಡಬೆಟ್ಟದ ಅಷ್ಟದಿಕ್ಪಾಲಕರ ಮಂಟಪದಲ್ಲಿನ ಕ್ರಿ ಶ ೧೫೪೯ನೆಯ ವರ್ಷದ ಶಾಸನ (ನಂ ೩೯) ಮಂಡಳೇಶ್ವರ ಕುಲೋತ್ತುಂಗ ಚಂಗಾಳ್ವ ಮಹಾದೇವನನ್ನು ಉಲ್ಲೇಖಿಸುತ್ತದೆ ಈತನು ಚಂಗಾಳ್ವ ಮನೆತನಕ್ಕೆ ಸೇರಿದ ಕ್ರಿ ಶ ೧೫೦೨ ರಿಂದ ೧೫೩೩ರ ವರೆಗೆ ಆಳಿದ ನಂಜನ ಅನುಜ[1] ಈ ಮಹಾದೇವನು ರಾಜ್ಯವಾಳಲಿಲ್ಲ ಪ್ರಸ್ತುತ ಶಾಸನ ಈತನ ಸೋದರನ ಆಳಿಕೆಯ ಕಾಲಕ್ಕೆ ಸೇರಿದುದಾಗಿದೆ ಹಿರೇಮಳಲಿ ಶಾಸನದಲ್ಲಿ[2] ಕೊಟ್ಟಿರುವ ಈ ಮನೆತನದ ವಂಶಾವಳಿಯಿಂದಲೂ ಈತನು ನಂಜನ ಅನುಜನೆಂಬುದು ತಿಳಿದುಬರುತ್ತದೆ ೧೫೦೩ನೆಯ ವರ್ಷದ ಆ ಶಾಸನದಲ್ಲಿ ಈ ಮಹಾದೇವನು ಅನ್ನದಾನಿ ಲಿಂಗಕ್ಕೆ ಆ ಗ್ರಾಮವನ್ನು ದಾನಮಾಡಿದನೆಂಬ ವಿಷಯ ಹೇಳಿದೆ ಈ ಎರಡು ಶಾಸನಗಳಲ್ಲೂ ಮಹಾದೇವನು ಆಳುತ್ತಿದ್ದನೆಂದು ಹೇಳಿಲ್ಲ ಈತನ ಅಣ್ಣನೊಡನೆ ಇವನ ಸಂಬಂಧ ಬಹಳ ಸೌಹಾರ್ದಯುತವಾಗಿದ್ದು, ಈತನು ಸ್ವತಂತ್ರವಾಗಿಯೇ ದಾನಗಳನ್ನು ಮಾಡುವ ಅಧಿಕಾರಪಡೆದಿದ್ದನೆಂಬುದು ಇದರಿಂದ ಸ್ಪಷ್ಟವಾಗುತ್ತದೆ ೧೫೦೩ನೆಯ ವರ್ಷದ ಶಾಸನದಲ್ಲಿ ಈತನನ್ನೂ ನೃಪತಿ ಎಂದು ಕರೆಯಲಾಗಿದೆ ಆದರೆ ಪ್ರಸ್ತುತ ಶಾಸನದಲ್ಲಿ ಈತನು ಮಂಡಲೇಶ್ವರನೆನಿಸಿಕೊಂಡಿದ್ದಾನೆ ಈತನ ಪ್ರಧಾನಸಿರೋಮಣಿಯಾದ ಸಮ್ಯಕ್ತ್ವ ಚೂಡಾಮಣಿ ಎನಿಸಿದ ಚಂನಬೊಮ್ಮರಸನು ಬೊಮ್ಮಣಮಂತ್ರಿಯ ಸಹೋದರನು ನಂಜರಾಯಪಟ್ಟಣದ ಶ್ರಾವಕ ಭವ್ಯಜನಂಗಳ ಸಹಾಯದಿಂದ ಈತನು ಗುಂಮಟಸ್ವಾಮಿಯ ಬಳ್ಳಿವಾಡವನ್ನು ಜೀರ್ಣೋದ್ಧಾರ ಮಾಡಿದನೆಂದು ಶಾಸನ ತಿಳಿಸುತ್ತದೆ ಶಾಸನದಲ್ಲಿ ಭಾಷೆಯನ್ನು ಭಿನ್ನವಾಗಿ ಅರ್ಥೈಸಿದ ನರಸಿಂಹಾಚಾರ್ಯರು ಚಂನಬೊಂಮರಸನ ತಂದೆಯಾದ ಕೇಶವನಾಥನನ್ನು ಪ್ರಧಾನಸಿರೋಮಣಿ ಎಂದು ಭಾವಿಸಿದ್ದಾರೆ[3]

## ನುಗ್ಗೇಹಳ್ಳಿ

ಕ್ರಿ ಶ ೧೬ನೆಯ ಶತಮಾನದ ೫೫೬ನೆಯ ಶಾಸನ ನುಗುಹಳ್ಳಿಯ ನಾಯಕನಾದ ತಿರುಮಲರಾಜನಾಯಕನು ತನ್ನ ತಂದೆ ದಾಸಪನಾಯಕನಿಗೆ ಪುಣ್ಯವಾಗಲಿ ಎಂದು ದಾಸಪುರ ಗ್ರಾಮವನ್ನು ದಾನಮಾಡಿದನೆನ್ನುತ್ತದೆ ಸ್ವಲ್ಪಮಟ್ಟಿಗೆ ಭಿನ್ನವಾಗಿರುವ ಈ ಶಾಸನದಲ್ಲಿ ಕಿಕೇರಿಯ ಉಲ್ಲೇಖವಿದೆ ಇದು ಶ್ರವಣಬೆಳಗೊಳದ ಸಮೀಪದಲ್ಲಿರುವ ಕಿಕ್ಕೇರಿಗ್ರಾಮ

## ಕವಿಗಳು-ರೂವಾರಿಗಳು

ಪ್ರಸ್ತುತ ಸಂಪುಟದಲ್ಲಿ ಶಾಸನಕವಿಗಳು ಹಲವರು ಬೆಳಕಿಗೆ ಬಂದಿದ್ದಾರೆ ಕವಿಚಕ್ರವರ್ತಿ ಎನಿಸಿದ ರನ್ನನದೆಂದು ಹೇಳಲಾದ ಎರಡು ಶಾಸನಗಳು (ನಂ ೪೩ ಮತ್ತು ೨೨೪) ಇದರಲ್ಲಿವೆ ಎರಡು ಶಾಸನಗಳ ಪಾಠಗಳೂ ಒಂದೇ ಆಗಿವೆ ಶ್ರೀ ಕವಿರತ್ನ ಎಂಬುದು ಆ ಶಾಸನಪಾಠ ರತ್ನ ಎಂಬುದು ರನ್ನ ಎಂಬ ಹೆಸರಿನ ಸಂಸ್ಕೃತರೂಪ ಕವಿ ಎಂಬ ಪೂರ್ವಪ್ರತ್ಯಯ ಸೇರಿ ಕವಿರತ್ನವಾಗಿದೆ ಇದು ರನ್ನ ಕವಿಯ ಹೆಸರೆಂದೂ ಯಾತ್ರಾರ್ಥಿಯಾಗಿ ಇಲ್ಲಿಗೆ ಬಂದಿರಬಹುದಾದ ಜೈನಧರ್ಮಾನುಯಾಯಿಯಾದ ಈ ಕವಿಯು ತನ್ನ ಹೆಸರನ್ನು ಇಲ್ಲಿ ಕೊರೆಯಿಸಿರುವನೆಂದೂ ಹೇಳಲಾಗಿದೆ ಇದನ್ನು ಒಪ್ಪಿಕೊಳ್ಳಲು ಖಚಿತವಾದ ಆಧಾರಗಳಿಲ್ಲವಾದರೂ ಈ ಊಹೆಯನ್ನು ಅಲ್ಲಗಳೆಯುವಂತಿಲ್ಲ ಇದರಂತೆಯೇ ನಾಗವರ್ಮ (ನಂ ೨೩೧ ಮತ್ತು ೨೨೪) ಎಂಬುದು 'ಛಂದೋಂಬುದಿ'ಯ ಕರ್ತೃವಾದ ನಾಗವರ್ಮನನ್ನು ಸೂಚಿಸಬಹುದೆಂದೂ ಹೇಳಲಾಗಿದೆ

---

[1] R Sewell and S K Aiyangar, *Historical Inscriptions of Southern India*, p 339

[2] *E C*, Vol IV, Hs 63

[3] Introduction, p 21 and p 67

ಸಂಪುಟದಲ್ಲಿ ಬೆಳಕಿಗೆ ಬಂದಿರುವ ಇತರ ಶಾಸನ ಕವಿಗಳು–ಲೇಖಕರು ಹನ್ನೆರಡನೆಯ ಶತಮಾನ ಮತ್ತು ನಂತರದವರು ಕ್ರಿ ಶ ೧೧೧೫ ಹಾಗೂ ೧೧೨೦ನೆಯ ವರ್ಷದ ೧೫೬ ಮತ್ತು ೧೩೬ನೆಯ ಶಾಸನಗಳನ್ನು ಬರೆದಾತ ಹೆಗ್ಗಡೆ ಚಾವರಾಜ ೧೧೨೩ನೆಯ ವರ್ಷದ ಶಾಸನವನ್ನು (೧೩೫) ಹೆಗ್ಗಡೆ ಮದ್ದಿಮಯ್ಯ ಬರೆದನು ಕ್ರಿ ಶ ೧೧೯೯ನೆಯ (ನಂ ೬೬) ಶಾಸನದ ಕರ್ತೃವಾದ ಮಲ್ಲಿನಾಥನು 'ಬಿರುದಲೇಖಕಮದನಮಹೇಶ್ವರ' ನೆಂದು ಬಿರುದಾಂಕಿತನಾಗಿದ್ದಾನೆ ಈತನು ಮಲ್ಲಿಷೇಣಮಲ ಧಾರಿದೇವರ ಗುಡ್ಡನಾಗಿದ್ದು ಆತನ ನಿಷಿದಿಶಾಸನವನ್ನು ರಚಿಸಿದ್ದಾನೆ (ನಂ ೭೭) ೧೭೨ನೆಯ ಶಾಸನವನ್ನು ಬರೆದಾತ 'ಲಿಖಿತಾಮನೋಹರ' ನಪ್ಪ ಗಂಗಣ್ಣ ಶಾಸನದಲ್ಲಿ ಅದು 'ಗಂಗಣ್ಣನ ಲಿಖಿತ' ವೆಂಬ ಮಾತಿದೆ ಆದರೆ ಶಾಸನವನ್ನು ಕೆತ್ತಿದ ರೂವಾರಿಯ ಹೆಸರನ್ನೂ ಅದರಲ್ಲಿ ಉಲ್ಲೇಖಿಸಿರುವುದರಿಂದ ಗಂಗಣ್ಣನು ಶಾಸನ ಕರ್ತೃವೆಂದೇ ಭಾವಿಸಬೇಕಾಗುತ್ತದೆ ಒಮ್ಮೊಮ್ಮೆ ಕವಿ ರಚಿಸಿದ ಶಾಸನವನ್ನು ಕಲ್ಕುಟಿಗ ಕೆತ್ತುವ ಮುನ್ನ, ಕಲ್ಲಿನ ಮೇಲೆ ಮುದ್ದಾದ ಅಕ್ಷರಗಳಲ್ಲಿ 'ಬರೆದ' ಜನರ ಉಲ್ಲೇಖವೂ ಶಾಸನಗಳಲ್ಲಿ ಬರುತ್ತದೆ

ಈ ದೃಷ್ಟಿಯಲ್ಲಿ ೧೬೬ನೆಯ ಶಾಸನದಲ್ಲಿ ಕಾಣಿಸಿಕೊಂಡಿರುವ ಲೇಖಕ ಬೋಕಿಮಯ್ಯ ಶಾಸನ ಕರ್ತೃವೇ ಅಥವಾ ಅದನ್ನು ಕಲ್ಲಿನ ಮೇಲೆ ಬರೆದಾತನೇ ಎಂದು ಹೇಳುವುದು ಕಷ್ಟವಾಗುತ್ತದೆ ಆದರೆ ಇಲ್ಲಿಯೂ ರೂವಾರಿಯ ಹೆಸರಿರುವುದರಿಂದ ಈತನನ್ನು ಸಹ ಶಾಸನಕವಿ ಎಂದೇ ಪರಿಗಣಿಸಬೇಕು ಆದರೆ ೧೧ನೆಯ ಶತಮಾನಕ್ಕೆ ಸೇರಿದ ೨೧೫ನೆಯ 'ದುಗಣ ಬರೆದ' ನೆಂಬ ಶಾಸನದ ದುಗಣನು ಅದನ್ನು ಕಲ್ಲಿನ ಮೇಲೆ ಬರೆದಾತನಷ್ಟೇ ಎಂದು ತೋರುತ್ತದೆ ಅದರಂತೆಯೇ ೬ನೆಯ ಶತಮಾನದ ಶಾಸನವನ್ನು ಬರೆದಾತ ಪಲ್ಲವಾಚಾರಿ (೨೪) ಇಲ್ಲಿ ಈತನನ್ನು ರೂವಾರಿ ಎಂದು ಪರಿಗಣಿಸಬೇಕಾಗುತ್ತದೆ

೧೬೩ನೆಯ ಶಾಸನವನ್ನು ಹೊರತುಪಡಿಸಿ ಉಳಿದ ೬೬, ೮೨, ೧೩೫, ೧೩೬, ೧೪೯, ೧೯೯ ಮತ್ತು ೫೨೬ನೆಯ ಶಾಸನಗಳನ್ನು ಕಂಡರಿಸಿದ ರೂವಾರಿ 'ಬಿರುದರೂವಾರಿಮುಖತಿಳಕ'ನೆನಿಸಿದ ಹೊಯ್ಸಳಾಚಾರಿಯ ಮಗ ಗಂಗಾಚಾರಿ ವ ವರ್ಧಮಾನಾಚಾರಿ ೧೬೬ನೆಯ ಶಾಸನವನ್ನು ಕೊರೆದಾತ ಗಂಗಾಚಾರಿಯ ತಮ್ಮ ಕಾಂವಾಚಾರಿ ಚಾಮುಂಡರಾಯ ಬಸದಿಯ ಮುಂದಿನ ಬಂಡೆಯಮೇಲಿನ ಇದೇ ಕಾಲದ ಸಂ ೧೬೩ನೆಯ ಶಾಸನವನ್ನು ಕಂಡರಿಸಿದಾತ 'ನವಣ ಬಲ್ಲರದೇವ' ಬಿರುದಾಂಕಿತ ನಾದ ರೂವಾರಿ ರಾವೋಜನ ಮಗ ದಾಸೋಜ

ಪ್ರಖ್ಯಾತವಾದ 'ಗುಮ್ಮಟಜಿನೇಂದ್ರಸ್ತವ' ಶಾಸನವನ್ನು (ನಂ ೩೩೬) ರಚಿಸಿದಾತ ಕನ್ನಡಗವಿಬಪ್ಪ ನೆಂದೆನಿಸಿದ ಬೊಪ್ಪಣಪಂಡಿತ ಕವಡಮಯ್ಯನ ದೇವಣನಾಣತಿಯಂತೆ ಬಾಗಡಗೆಯ ರುದ್ರ ಇದನ್ನು ಪ್ರತಿಷ್ಠಾಪಿಸಿದ ೩೬೦ನೆಯ ಸಂಸ್ಕೃತ ಶಾಸನದ ಕವಿ ಅರ್ಹದ್ದಾಸ ಇದು ಪಂಡಿತಾರ್ಯಯತಿಯ ನಿಷಿಧಿಶಾಸನ ಇದರ ಕಾಲ ಕ್ರಿ ಶ ೧೯೩೮ ಇದರಂತೆಯೇ ಕ್ರಿ ಶ ೧೪೩೨ನೆಯ ಶ್ರುತಮುನಿಯ ನಿಷಿಧಿ ಶಾಸನವನ್ನು (ನಂ ೩೬೪) ರಚಿಸಿದಾತ ಮಂಗರಾಜಕವಿ ಇದೂ ಸಂಸ್ಕೃತ ಶಾಸನವೇ

ಬೊಮ್ಮೇನಹಳ್ಳಿಯ ಶಾಸನ (ನಂ ೫೫೨) ಕ್ರಿ ಶ ೧೧೩೮ (ಅಥವಾ ೧೧೪೦)ನೆಯ ವರ್ಷದಲ್ಲಿ ಕಿಱಿಯ ಬಸವಾಚಾರಿ ಒಂದು ಕೆಱೆಯನ್ನೂ ದೇವಾಲಯವನ್ನೂ ಕಟ್ಟಿಸಿದನೆಂದು ಹೇಳುತ್ತದೆ ಶಾಸನ ಒಡೆದಿದ್ದು ಆ ದೇವಾಲಯ ಯಾವ ದೇವರದು ಎಂಬುದು ತಿಳಿಯದಾಗಿದೆ ಆದರೆ, ಶಾಸನದಲ್ಲಿ ದೇವರನ್ನು ಮಾಡಿದುದು 'ಮೌಲಾಚಾರಿಯುಂ ಆತನಳಿಯ ಕತಾಚಾರಿಯುಂ' ಎಂದು ಹೇಳಿದೆ, ಇವರೀರ್ವರೂ ರೂವಾರಿಗಳೆಂಬುದು ಇದರಿಂದ ಸ್ಪಷ್ಟವಾಗುತ್ತದೆ ಮೌಲಾಚಾರಿ ಎಂಬ ಹೆಸರು ಗಮನಾರ್ಹವಾಗಿದೆ

## ಅನಿರ್ದಿಷ್ಟ ವಿಷಯಗಳು

೧೧೪ನೆಯ ಶಾಸನ ಪೆರ್ಬ್ಬಾಣ ವಂಶಕ್ಕೆ ಸೇರಿದ ಒಬ್ಬಾತನ ಮರಣವನ್ನು ಗುರುತಿಸುವ ಒಂದು ನಿಷಿದಿ ಶಾಸನ ಕ್ರಿ ಶ ೬ನೆಯ ಶತಮಾನಕ್ಕೆ ಸರಿಹೋಗಬಹುದಾದ ಲಿಪಿಯಲ್ಲಿದೆ ಪೆರ್ಬ್ಬಾಣ ಎಂಬುದು ಪೆರ್ಬ್ಬಾಣ (ಬೃಹದ್ಬಾಣ) ವಂಶವಾಗಿರ ಬಹುದು ಸಾಯುವ ಮುನ್ನ ಈತನಿಗೆ ಮೃತ್ಯು ಸಮೀಪಿಸುತ್ತದೆಯೆಂಬ ತಿಳಿವು ಉಂಟಾಗಿ ಈತನು ವ್ರತಗಳನ್ನು ಕೈಗೊಂಡಂತೆ ತೋರುತ್ತದೆ ದುರದೃಷ್ಟವಶಾತ್ ಶಾಸನ ದಕ್ಕೆ ಹೊಂದಿದ್ದು ವಿವರಗಳನ್ನು ತಿಳಿಯಲು ಸಾಧ್ಯವಿಲ್ಲವಾಗಿದೆ

೧೩ನೆಯ ಶಾಸನವೂ ಸುಮಾರು ಕ್ರಿ ಶ ೬ನೆಯ ಶತಮಾನಕ್ಕೆ ಸೇರಿದುದೇ ಆಗಿದೆ ಕಟವಪ್ರಗಿರಿಯ ಮೇಲೆ ಅರಿಷ್ಟನೇಮಿಯು ಮರಣಹೊಂದಿದ ಸಮಯದಲ್ಲಿ ದಿಂಡಿಕರಾಜನು ಅಲ್ಲಿ ಸಾಕ್ಷಿಯಾಗಿದ್ದನೆಂದು ಶಾಸನ ಹೇಳಿದೆ ಈ

–ಹನ್ನೆರಡನೆಯ ಶತಮಾನಗಳಲ್ಲಿ ಶೌರ್ಯಪ್ರದರ್ಶನಕ್ಕೆ ಕುರುಹು ಎಂದು ಭಾವಿಸಿದಂತೆ ತೋರುತ್ತದೆ ಚಾಮುಂಡರಾಯನೇ ಪೌದನಪುರದ ಬಾಹುಬಲಿಯನ್ನರಸಿ ಹೊರಟಾಗ ಬಾಣವೊಂದನ್ನು ಬಿಟ್ಟು ಅದು ಬಿದ್ದಲ್ಲಿ ಬಾಹುಬಲಿ ವಿಗ್ರಹ ಕಾಣಿಸಿತೆಂಬ ಕತೆ 'ಭುಜಬಲಿಚರಿತೆ'ಯಲ್ಲಿದೆ ಈ ನಂಬಿಕೆ ಬಹುಶಃ ಅಂದು ಪ್ರಬಲವಾಗಿದ್ದು, ಅದನ್ನು ಶೌರ್ಯಪ್ರದರ್ಶನಕ್ಕೆ ಸಾಕ್ಷಿ ಎಂದು ಭಾವಿಸಿರಬೇಕು ಇಲ್ಲಿನ ಹಲವು ಶಾಸನಗಳು ಇಂತಹ ಪ್ರದರ್ಶನಗಳನ್ನು ಉಲ್ಲೇಖಿಸುತ್ತವೆ ಕ್ರಿ ಶ ೧೧೮೬ನೆಯ ವರ್ಷದ ಚಿಕ್ಕಬೆಟ್ಟದ ಶಾಸನದಲ್ಲಿ (ನಂ ೨೧೭) ಮಲೆಯಾಳ ಅಥ್ಯಾಡಿನಾಯಕನು ಹಿರಿಯಬೆಟ್ಟದಿಂದ ಚಿಕ್ಕಬೆಟ್ಟಕ್ಕೆ 'ಎಚ್ಚ' ಎಂದಿದೆ ಇದೇ ವರ್ಷದ ಇನ್ನೊಂದು ಶಾಸನ (ನಂ ೪೩೭) ದೊಡ್ಡಬೆಟ್ಟದಲ್ಲಿದೆ ಇದರಲ್ಲಿ ಮಲೆಆಳ ಅಪ್ಪಾಡಿನಾಯಕನು 'ಇಲ್ಲಿದು' (ಅಂದರೆ ದೊಡ್ಡಬೆಟ್ಟದಿಂದ) ಚಿಕ್ಕಬೆಟ್ಟಕ್ಕೆಚ್ಚ ಎಂದಿದೆ ಎಚ್ಚ ಎಂದರೆ ಎಸೆದನು, ಚಿಮ್ಮಿದನು ಎಂಬ ಅರ್ಥವಾಗುತ್ತದೆ ಏನನ್ನು ಚಿಮ್ಮಿದನೆಂದು ಹೇಳಿಲ್ಲ ಈ ಎರಡೂ ಶಾಸನಗಳಲ್ಲಿ ಉಕ್ತನಾದವನು ಒಬ್ಬನೇ ಎಂದು ತೋರುತ್ತದೆ ಅಥ್ಯಾಡಿ ನಾಯಕನೇ ೪೩೭ರಲ್ಲಿ ಅಪ್ಪಾಡಿನಾಯಕನೆಂದು ಹೆಸರಿಸಲ್ಪಟ್ಟಿದ್ದಾನೆ ಈ ಎರಡರಲ್ಲಿ ಯಾವುದು ಸರಿಯಾದ ಹೆಸರು ಎಂದು ಹೇಳಲಾಗದು ಈತನು ಕೊಮರಚಣಾಅಕ (ಕೊಮರಚನಾಯಕ)ನ ತಮ್ಮನೆಂಬುದು ೪೩೭ರಿಂದ ಸ್ಪಷ್ಟವಾಗುತ್ತದೆ

ಇದರಂತೆಯೇ ಚಿಕ್ಕಬೆಟ್ಟದ ೨೫೭ನೆಯ ಶಾಸನದಲ್ಲಿ ಮಲಯಾಳ ಕೊದಯುಶಂಕರನು 'ಇಲ್ಲಿದ್ದು', (ಎಂದರೆ ಆ ಶಾಸನವಿದ್ದಲ್ಲಿಂದ?) ಗದ್ದೆಯ ಹಡುವಣ ಹುಣಿಸೆಯ ಮೂಱು ಗುಂಡಿಗೆ ಚಿಮ್ಮಿದನೆಂದಿದೆ ನಂ ೨೫೭ ಇದೇ ವಿಷಯವನ್ನೊಳಗೊಂಡ ತಮಿಳು ಶಾಸನ ಇದರಲ್ಲಿ ಅವನ ಹೆಸರು ಕೊದೈಶಂಕರ ಎಂದಿದೆ ಅವನು ಗುರಿ ಇಟ್ಟಿದ್ದು ಮೂಱು ಗುಂಡಿಗೆ ಅಲ್ಲ, ಆದರೆ ಗದ್ದೆಯ ಪಶ್ಚಿಮದ ಹುಣಿಸೆಯ ಮರಕ್ಕೆ ಎಂದಿದೆ ಇದನ್ನವಲಂಬಿಸಿ ನಂ ೨೫೭ರಲ್ಲಿಯೂ ಆತನು ಮೂಱು ಗುಂಡುಗಳನ್ನು ಹುಣಿಸೆಯ ಮರಕ್ಕೆ ಗುರಿ ಇಟ್ಟನೆಂದು ಹೇಳಲಾದೀತೆ? ಈಶ್ವರ ಸಂವತ್ಸರದ ಪ್ರಸ್ತಾಪವಿರುವ ಈ ಶಾಸನಗಳು ಕ್ರಿ ಶ ೧೩ನೆಯ ಶತಮಾನಕ್ಕೆ ಸೇರಿದವು ಅದೇ ಕಾಲದ ಇನ್ನೊಂದು ಶಾಸನ (೪೩೫) ದೊಡ್ಡಬೆಟ್ಟದಲ್ಲಿದೆ ಇದರಲ್ಲಿ ಕೆದೆ ಸಂಖರನಾಯಕನು 'ಬಿಳ್ಳುಗೊಳಫ ಯೆಚ್ಚ ಬೆಳ ಬಡಿಗರ ಬಿಟಕೆ' ಎಂದಿದೆ ಇದರ ಅರ್ಥ ಸ್ಪಷ್ಟವಾಗಿಲ್ಲ ಈ ಸಂಖರನಾಯಕನು ಮೇಲಿನ ಎರಡೂ ಶಾಸನಗಳಲ್ಲಿ ಉಕ್ತನಾದವನೇ ಆಗಿರಬೇಕು ಈ ಶಾಸನದಲ್ಲಿ ಈತನನ್ನು ವೀರಪಲ್ಲವರಾಯನ ಮಗನೆಂದೂ 'ಅರಕೆಱೆಯ ವೀರ'ನೆಂದೂ ವರ್ಣಿಸಿದೆ ಇವರು ತಿಗುಳರು ಅಥವಾ ಮಲೆಯಾಳಿಗಳು ಎಂದು ಊಹಿಸುವ ಸಾಧ್ಯತೆ ಇದೆ ಶಾಸನದಲ್ಲಿ 'ಮಗ' 'ಮಕ' ಆಗಿದೆ ನರಸಿಂಹಾಚಾರ್ಯರು ಈತನನ್ನು ಅರಕೆಱೆಯ ವೀರಪಲ್ಲವರಾಯನ ಮಗನೆಂದು ಹೇಳಿ, ಪಲ್ಲವ ಮನೆತನಕ್ಕೆ ಸಂಬಂಧ ಕಲ್ಪಿಸಿದಂತೆ ತೋರುತ್ತದೆ[1] ಅದು ಅಷ್ಟು ಸಮಂಜಸವಲ್ಲ

ದೊಡ್ಡಬೆಟ್ಟದ ಮೇಲಿನ ಚನ್ನಣ್ಣ ಬಸದಿಯನ್ನು ಕಟ್ಟಿಸಿದಾತನು ನರಸಿಂಹಪುರದ ಪುಟಸಾಮಿಸೆಟ್ಟಿ ಮತ್ತು ದೇವೀರಮ್ಮನವರ ಮಗನಾದ ಚೆಂನಂಣ ಹಾಗೂ ಆತನ ಅಣ್ಣ ಚಿಕ್ಕಂಣ ಶಾಸನದಲ್ಲಿ (ನಂ ೪೨೪) ಇದನ್ನು ಶ್ರೀ ಸಮುದ್ರ ಆದೀಶ್ವರಸ್ವಾಮಿ ಎಂದು ಕರೆಯಲಾಗಿದೆ ಬಸದಿಯ ಮುಂದಿನ ಮಾನಸ್ತಂಭ ಗೋಪುರದ ಬಾಗಿಲು, ದೊಣೆ ಇತ್ಯಾದಿಗಳನ್ನು ಸಹ ಈತನೇ ಸೇವಾರ್ತ್ಥವಾಗಿ ಕಟ್ಟಿಸಿದನೆಂದು ತಿಳಿಸಿದೆ (ನಂ ೪೨೭) ಶ್ರವಣಬೆಳಗೊಳದಲ್ಲಿನ ಚನ್ನಣ್ಣನ ಕೊಳವನ್ನು ಕಟ್ಟಿಸಿದಾತನೂ ಈತನೇ (ನಂ ೫೮೯–೧೩) ಇದಲ್ಲದೆ ಒಂದು ಮಂಟಪವನ್ನು ಕಟ್ಟಿಸಿ, ತೋಟವನ್ನು ಸಹ ಬೆಳಸಿದನೆಂದು ತೋರುತ್ತದೆ (ನಂ ೫೧೪) ಸಮುದ್ರಾದೀಶ್ವರಸ್ವಾಮಿಯ ನಿತ್ಯಸಮಾರಾಧನೆ ನಿತ್ಯೋತ್ಸವಗಳಿಗಾಗಿ ಜಿಂನಯನಹಳ್ಳಿಯನ್ನು ದಾನ ಮಾಡಿದುದಾಗಿ ಜಿನ್ನೇನಹಳ್ಳಿಯ ಶಾಸನ ತಿಳಿಸುತ್ತದೆ (ನಂ ೫೪೦) ಇದರ ಕಾಲ ಕ್ರಿ ಶ ೧೬೭೩ ಈ ಮೇಲ್ಕಾಣಿಸಿದ ಶಾಸನಗಳು ಇದೇ ಕಾಲಕ್ಕೆ ಸೇರಿದವುಗಳೇ

ಇಲ್ಲಿನ ಶಾಸನಗಳಲ್ಲಿ ದೇವರ ಅಭಿಷೇಕಕ್ಕೆ ಹಾಲನ್ನು ಒದಗಿಸಲು ಹಣದ ದಾನವನ್ನು ಮಾಡಿದ ಉಲ್ಲೇಖಗಳಿವೆ ನಂ ೩೪೭ರಲ್ಲಿ ಹಲಸೂರ ಕೇತಿಸೆಟ್ಟಿಯು ಪ್ರತಿನಿತ್ಯ ದೇವರ ಅಭಿಷೇಕಕ್ಕೆ ಮೂಱು ಮಾನ ಹಾಲನ್ನು ಒದಗಿಸಲೆಂದು ೩ ಗದ್ಯಾಣ ಹೊಂನನ್ನು ದಾನಮಾಡಿದನೆಂದಿದೆ ನಂ ೩೪೯ರಲ್ಲಿ (ಕ್ರಿ ಶ ೧೨೭೪) ಗೇರಸಪೆಯ ಆದಿಯಣ್ಣ ಅಕ್ಷಯಭಂಡಾರವಾಗಿ ಇಟ್ಟಿದ್ದ ನಾಲ್ಕು ಗದ್ಯಾಣಕ್ಕೆ ತಿಂಗಳಿಂಗೆ ಹೊಂಗೆ ಹಾಗ ಬಡ್ಡಿಯಂತೆ (ಅಂದರೆ, ೪ ಗದ್ಯಾಣಕ್ಕೆ ತಿಂಗಳಿಗೆ ೪ ಹಾಗ–ವರ್ಷಕ್ಕೆ ೪೮ ಹಾಗ) ಬಂದ ಹಣದಲ್ಲಿ ನಿತ್ಯಾಭಿಷೇಕಕ್ಕೆ ಒಂದು ಬಳ್ಳ ಹಾಲನ್ನು ನಡೆಸಬೇಕೆಂದಿದೆ ಎಂದ ಮೇಲೆ ೪ ಹಾಗಕ್ಕೆ ದಿನಂಪ್ರತಿ ಒಂದು ಬಳ್ಳದಂತೆ ಒಂದು ತಿಂಗಳಿಗೆ ಸಾಕಾಗುವಷ್ಟು ಹಾಲು ದೊರೆಯುತ್ತಿತ್ತು ಎನಿಸುತ್ತದೆ ನಂ ೩೪೬, ೪೩೮, ೪೭೮ನೆಯ ಶಾಸನಗಳಲ್ಲಿಯೂ ಇಂತಹ ವಿವರಗಳಿವೆ ಇವುಗಳನ್ನು ಕ್ರೋಢೀಕರಿಸಿ ಇಂದಿನ (ಕ್ರಿ ಶ ೧೯೨೮ರಂದಿನ) ಲೆಕ್ಕಾಚಾರ

---

[1] Introduction p 67

ದಂತೆ ಒಂದು ರೂಪಾಯಿಗೆ ಸುಮಾರು ೯೩ ಮಣ ಹಾಲು ಶ್ರವಣಬೆಳಗೊಳ ಹಾಗೂ ಆಸುಪಾಸಿನಲ್ಲಿ ಸಿಗುತ್ತಿತ್ತೆಂದು ಶ್ರೀ ಹೀರಾಲಾಲರು ಲೆಕ್ಕಾಚಾರ ಮಾಡಿದ್ದಾರೆ [1]

೧೩ನೆಯ ಶತಮಾನದ ೪೫೫ನೆಯ ಶಾಸನವನ್ನು ಈಗಾಗಲೇ ಪ್ರಸ್ತಾಪಿಸಿದ್ದೇವೆ ಇದರಲ್ಲಿ ಗೋಮಟಪುರದ ಮನೆದೆಱೆ–ಮನೆಗಳ ಮೇಲಿನ ತೆರಿಗೆ-ಗೆ ಸಂಬಂಧಿಸಿದ ಕೆಲವು ವಿವರಗಳಿವೆ ಅಕ್ಷಯ ಸಂವತ್ಸರದಿಂದ ಆರಂಭಿಸಿ ಪ್ರತಿಯೊಂದು ಮನೆಗೆ ಒಂದು ಹಣದಂತೆ ಮನೆದೆಱೆ ಕೊಡಬೇಕೆಂತಲೂ ಆರಂಭದಲ್ಲಿ ಒಟ್ಟಿಗೆ ಎಂಟು ಹಣವನ್ನು ಈ ತೆರಿಗೆಯ ಸಲುವಾಗಿ ಕೊಡಬೇಕೆಂದೂ ನಿರ್ಣಯಿಸಿದಂತೆ ತೋರುತ್ತದೆ ಇದನ್ನು ಆ ಸ್ಥಳದ ಆಚಾರ್ಯರಿಗೆ ಸಲಿಸಿದರೆ, ಗಾಣದ ಮೇಲಿನ ತೆರಿಗೆ, ಮಳಬ್ರಯ ಹಾಗೂ ಇಂತಹ ಇತರ ತೆರಿಗೆಗಳನ್ನೇನು ಕೊಡಬೇಕಾಗಿ ಬಂದರೂ ಅದನ್ನು ಆಚಾರ್ಯರೇ ಅಧಿಕಾರಿಗಳೊಡನೆ ವ್ಯವಹರಿಸಿ ತೆರಬೇಕೆಂದು ಈ ಪತ್ನಳೆಯ ಕ್ರಮದಲ್ಲಿ ಸೂಚಿಸಿದಂತಿದೆ ಅಂತೆಯೇ ಈ ಒಂದು ನಿರ್ಧಾರಕ್ಕೆ ಬಂದಮೇಲೆ ಯಾರೊಬ್ಬರೂ ಆಚಾರ್ಯರಲ್ಲಿ ಹೋಗಿ ಕೊಡಬೇಕಾದ ತೆರಿಗೆಯಲ್ಲಿ ಒಂದು ಹಾಗವನ್ನೋ ಬೇಳೆಯನ್ನೋ ಕಡಿಮೆ ಮಾಡಿಕೊಳ್ಳಿ ಎಂದು ಬೇಡಿಕೊಳ್ಳಕೂಡದು, ಒತ್ತಾಯ ತರಕೂಡದು ಎಂತಲೂ ಇದರಲ್ಲಿ ವಿಧಿಸಲಾಗಿದೆ

೪೭೯ನೆಯ ಶಾಸನದಲ್ಲಿ ಮೂಲಸಂಘದ ಸಮುದಾಯಗಳು ಗೊಮ್ಮಟದೇವ, ಪಾರ್ಶ್ವದೇವ, ದೇವರವಲ್ಲಭದೇವ—ಈ ದೇವರುಗಳಿಗೆ ಸೇರಿದ ಗದ್ದೆ, ಬೆದ್ದಲುಗಳಿಗೆ ನೀಡಬೇಕಾದ ಅಭ್ಯಾಗತಿ, ಕಟಕಶೇಸೆ, ಮುಂತಾದವುಗಳನ್ನೆಲ್ಲಾ ಬಿಟ್ಟುಕೊಟ್ಟಿರುವುದಾಗಿ ತೀರ್ಮಾನಿಸಿದ್ದಲ್ಲದೆ ಹಿಂದೆ ಸಂಭುದೇವನೆಂಬಾತನು ಶ್ರೀ ದೇವರವಲ್ಲಭದೇವರಿಗೆ ಸೇರಿದ್ದ ಹಾಡುವರಹಳ್ಳಿಯಲ್ಲಿ 'ಅನ್ಯಾಯವಾಗಿ ಮಳಬ್ರಯುವಾಗಿ ಕೊಂಬ ಗದ್ಯಾಣ ಅಯ್ದುನು' ಅದೇ ದೇವರಿಗೆ ದಾನವಾಗಿ ಬಿಟ್ಟನೆಂದೂ ಹೇಳಿದೆ ಈ ಎರಡು ಶಾಸನಗಳಲ್ಲಿ ಉಕ್ತವಾಗಿರುವ 'ಮಳಬ್ರಯ' ಎಂತಹುದೆಂದು ತಿಳಿಯದಾಗಿದೆ

೧೨೮೮ನೆಯ ವರ್ಷದ ೪೮೯ನೆಯ ಶಾಸನದಲ್ಲಿ ಸ್ವದೇಶಿ ಪರದೇಶಿಯಿಂದ ಬಂದಂತಹ ದವಣ ಗದ್ಯಾಣ ನೂರಕ್ಕೆ ಒಂದು ಗದ್ಯಾಣದಂತೆ ದವಣವನ್ನು ಆದಿದೇವರಿಗೆ ಸಲಿಸಬೇಕೆಂದಿದೆ ಇದರ ಅರ್ಥ ಸಹ ಸ್ಪಷ್ಟವಾಗದು ಈ ಶಾಸನ ಗೊಂಮಟಪುರದ ಮಾಣಿಕ್ಯನಖರಂಗಳ ನಡುವೆ ಆದ ಒಡಂಬಡಿಕೆಯಾದ ಕಾರಣ ಸಂದರ್ಭಾನುಸಾರವಾಗಿ ಇದು ಆ ಮಾಣಿಕ್ಯದ ವ್ಯಾಪಾರಕ್ಕೆ ಸಂಬಂಧಿಸಿದಂತಹ ಒಂದು ತೆರಿಗೆಯೋ ಶುಲ್ಕವೋ ಆಗಿರಬಹುದೆನಿಸುತ್ತದೆ ೪೮೧ನೆಯ ಶಾಸನದಲ್ಲಿ ತಿಪ್ಪೆಸುಂಕ, ಮಱೆಪನ್ನಾಯಗಳ ಪ್ರಸ್ತಾಪವಿದೆ ಒಂದು ಅಡಕೆಯ ಹೇರಿಗೆ ೨೦೦ ಅಡಕೆ ಒಂದು ಹಸುಬೆಗೆ ೨೦ ಅಡಕೆ ತಿಪ್ಪೆಸುಂಕವಾಗಿ ಕೊಡಬೇಕೆಂದಲ್ಲಿ, ಒಂದು ಹೇರಿನಲ್ಲಿ ೧೦ ಹಸುಬೆಗಳಿದ್ದಂತಾಗುತ್ತದೆ ಊರತಿಪ್ಪೆಯನ್ನು ಗೊಬ್ಬರವಾಗಿ ಉಪಯೋಗಿಸಿ, ಅದಕ್ಕಾಗಿ ಕೊಡಬೇಕಾದ ಶುಲ್ಕ ತಿಪ್ಪೆಸುಂಕವೆನಿಸಿತು ಮಱೆಪನ್ನಾಯ ಎಂಬುದು ಎಲೆ (ವೀಳೆಯದೆಲೆ)ಗೆ ತೆರಬೇಕಾದ ಸುಂಕವೆನಿಸುತ್ತದೆ 'ಎಲೆಯ ಟಿಗ ಹಾಗ ೧ ಮೇಲೆಲೆ ೨೦೦' ಎಂದಿರುವುದನ್ನು ಗಮನಿಸಿದರೆ ಇಲ್ಲೂ ಸುಂಕವನ್ನು ಹಣದ ರೂಪದಲ್ಲಿಯಾಗಲೀ ವಸ್ತುವಿನ ರೂಪದಲ್ಲಿಯಾಗಲೀ ಪಡೆಯುತ್ತಿದ್ದರೆಂಬುದು ತಿಳಿದುಬರುತ್ತದೆ

೪೩೨ನೆಯ, ೧೨ನೆಯ ಶತಮಾನದ ಶಾಸನ ಜಿನವರ್ಮನೆಂಬೊಬ್ಬ ಜೋಗಿಯ ಕಂಖರಿ ವಾದ್ಯವನ್ನು ವರ್ಣಿಸುತ್ತದೆ ಈತನು ಕೊಳ್ಳಿಪಾಕೆಯ ಮಾಣಿಕ್ಯದೇವರ ಶಿಷ್ಯ ಮೊರವೂರ ಆದಿನಾಥನಿಗೆ ಪ್ರಣಾಮಗಳನ್ನು ಸಲ್ಲಿಸುತ್ತಾನೆಂದು ಹೇಳುವ ಈ ಶಾಸನ ಅವನ ಕಂಖರಿಯ ಧ್ವನಿಯನ್ನು ಕೇಳಿದ ದುರ್ಜನರಿಗೆ ಭಯವೂ ಸುಜನರಿಗೆ ಅನುರಾಗವೂ ಉದಯಿಸುತ್ತದೆಂದು ವರ್ಣಿಸಿದೆ

೫೦೩–೦೪ನೆಯ ಶಾಸನಗಳಲ್ಲಿ ಗಂಗರಾಜನ ಅತ್ತಿಗೆಯಾದ ಜಕ್ಕಮವ್ವೆ ನಯಣದ ದೇವರನ್ನು ಮಾಡಿಸಿ, ಪ್ರತಿಷ್ಠೆಯ ಮಾಡಿಸಿದಳೆಂದು ಹೇಳಿದೆ 'ನಯಣದ ದೇವ' ಎಂಬ ಯಾವ 'ದೇವ'ರೂ ಜೈನರಲ್ಲಿ ಕಾಣಬರುವುದಿಲ್ಲ ಇಲ್ಲಿ ನಯಣ ಎಂಬ ಪದ ಲಯನ ಎಂಬ ಪದದಿಂದ ಬಂದಿರಬೇಕು ಎನಿಸುತ್ತದೆ ಲಯನ–ಲೇನ ಎಂಬುದು ಬೌದ್ಧರ ವಾಸಸ್ಥಳವಾದ ಗುಹೆಗಳಿಗೂ ಅಂತೆಯೇ ಜೈನರ ಗುಹೆಗಳಿಗೂ ಅನ್ವಯಿಸುತ್ತದೆಂಬುದು ತಿಳಿದಿದೆ ಶ್ರೀ ಡಿ ಎಲ್ ನರಸಿಂಹಾಚಾರ್ಯರು ಈ ಲಯನ ಎಂಬ ಪದ ಧ್ವನಿ ಹಾಗೂ ಉಚ್ಚಾರಣೆಗಳ ಬದಲಾವಣೆಗಳ ನಂತರ ಕನ್ನಡದಲ್ಲಿ ಬಳಕೆಗೆ ಬಂದು 'ನಯನ' ಎಂದಾಗಿದೆಯೆಂದೂ ಈ ಪದ ನಾಗರಾಜ (ಕ್ರಿ ಶ ೧೩೩೧)ನ 'ಪುಣ್ಯಾಸ್ರವ'ದಲ್ಲಿ ಉಪಯೋಗವಾಗಿದೆಯೆಂದೂ ತಿಳಿಸಿದ್ದಾರೆ [2] ಇದನ್ನು ಗಮನಿಸಿದಲ್ಲಿ ನಯಣದದೇವ ಎಂಬುದು ಯಾವುದಾದರೂ ಗುಹೆಯಲ್ಲಿಯೋ, ಗೋಡೆಯಲ್ಲಿಯೋ, ಬಂಡೆಯ ಮೇಲೋ ಕೊರೆಯಲಾದ ಉಬ್ಬುಚಿತ್ರಕ್ಕೆ ಅನ್ವಯವಾಗುವ ಪದ ಎಂದು ಹೇಳಬಹುದು ಲಯನಗಳಲ್ಲಿ ನಾವು ಕಾಣುವುದು ಇಂತಹ ಚಿತ್ರಗಳನ್ನೇ ಇವು

---

1 ಜೈನ ಶಿಲಾಲೇಖಸಂಗ್ರಹ (ಹಿಂದಿ), Vol I, Introduction pp 122–23

2 *Karnataka through the Ages*, p 107 note

ಪ್ರತ್ಯೇಕಗೊಳಿಸಲ್ಪಟ್ಟ ವಿಗ್ರಹಗಳಲ್ಲ ಗೋಡೆಗಳ, ಬಂಡೆಗಳ ಭಾಗವಾಗಿ, ಅವುಗಳಲ್ಲಿಯೇ ಮೂಡಿಸಲಾದ ಚಿತ್ರಗಳು ಪ್ರಸ್ತುತ ೫೦೩ನೆಯ ಶಾಸನ ಸಹ ಶ್ರವಣಬೆಳಗೊಳದ ಜಕ್ಕಿಕಟ್ಟೆಯ ದಕ್ಷಿಣಕ್ಕಿರುವ ದೊಡ್ಡದಾದ ಬಂಡೆಯ ಮೇಲೆ ಮೂಡಿಸಲಾದ ತೀರ್ಥಂಕರನ ಚಿತ್ರದ ಕೆಳಗೆ ಬರೆಯಲಾಗಿದೆ ಆದಕಾರಣ ನಯಣದದೇವ ಎಂಬ ಮಾತಿಗೆ ಹಾಗೆ ಕೊರೆಯಲಾದ ತೀರ್ಥಂಕರದೇವ ಎಂಬ ಅರ್ಥವನ್ನು ಕೊಡಬೇಕಾಗುತ್ತದೆ

ಈ ಶಾಸನದಲ್ಲಿ ಮೋಕ್ಷತಿಲಕವೆಂಬ ಜೈನವ್ರತದ ಉಲ್ಲೇಖವಿದೆ ಅನಂನ್ತವ್ರತ (ನಂ ೪೯೨), ರತ್ನತ್ರಯ ನೋಂಪಿ (ನಂ ೩೩೩), ಪಂಚಕಲ್ಯಾಣ (ನಂ ೩೪೪), ಪಂಚನಮಸ್ಕಾರ (ನಂ ೫೫೯) ಇತ್ಯಾದಿ ಜೈನರು ಆಚರಿಸುವ ವ್ರತಗಳ ಉಲ್ಲೇಖಗಳು ಪ್ರಸ್ತುತ ಸಂಪುಟದಲ್ಲಿವೆ 'ಶ್ರೀವಿಹಾರ'ವೆಂಬುದು ಒಂದು ಉತ್ಸವವೆಂದು ೪೮೬, ೪೮೭ ಮತ್ತು ೪೯೫ನೆಯ ಕ್ರಮವಾಗಿ ೧೪೫೬, ೧೪೫೮ ಮತ್ತು ೧೪೫೭ನೆಯ ವರ್ಷದ, ಶಾಸನಗಳಿಂದ ತಿಳಿದಿದೆ ೬೭ನೆಯ ಶಾಸನದಲ್ಲಿ ಮಲ್ಲಿಷೇಣ ಮಲಧಾರಿಗಳು ರತ್ನತ್ರಯಗಳನ್ನು ಆಗಮಗಳಲ್ಲಿ ಉಕ್ತವಾದ ವಿಧಿಯಲ್ಲಿ ಆರಾಧಿಸಿ ("ಆರಾಧ್ಯರತ್ನತ್ರಯಮಾಗಮೋಕ್ತಂ") ಜೀವತೊರೆದರೆಂದಿದೆ ಇಲ್ಲಿನ ರತ್ನತ್ರಯದ ಆರಾಧನೆಯು ರತ್ನತ್ರಯನೋಂಪಿಯೇ ಆಗಿರಬಹುದು ೫೫೯ನೆಯ ಶಾಸನದಲ್ಲಿ ಪಂಚನಮಸ್ಕಾರದ ಉಲ್ಲೇಖವಿದೆ ಇದರ ಕಾಲ ಸುಮಾರು ಕ್ರಿ ಶ ೧೨೧೪ ಕ್ರಿ ಶ ೧೨೧೫ನೆಯ ವರ್ಷದ ಧಾರವಾಡದ ಶಾಸನದಲ್ಲಿ[1] ಮೈಳಲಮಹಾದೇವಿಯ 'ಕೀಳ್ವಾಗುನೋಂಪಿಯ' ಪ್ರಸ್ತಾಪವಿದೆ ಇದು ಶಾಸ್ತ್ರೋಕ್ತವಾಗಿ 'ಕೆಳಗೆಬಾಗುವ', ಪ್ರಣಮಿಸುವ ಒಂದು ವ್ರತವಾಗಿರಬಹುದೆಂದು ಊಹಿಸಲಾಗಿದೆ ಪಂಚನಮಸ್ಕಾರವೆಂಬುದೇ ಈ ನೋಂಪಿಯಾಗಿರಬೇಕು ಕೀಳ್ವಾಗುನೋಂಪಿಯು ಪಂಚನಮಸ್ಕಾರದ ಕನ್ನಡ ರೂಪವಿದ್ದಂತೆ ತೋರುತ್ತದೆ ಅನನ್ತವ್ರತ, ತ್ರಿಭುವನತಿಲಕ ನೋಂಪಿಗಳು ನಮಗೆ ತಿಳಿದದ್ದೇ[2] ಮೋಕ್ಷತಿಲಕವೆಂಬುದು ೫೦೩ನೆಯ ಶಾಸನದಲ್ಲಿ ಹೇಳಲಾಗಿದೆ ಮೋಕ್ಷತಿಲಕ ಬಹುಶಃ ಈ ತ್ರಿಭುವನ ತಿಲಕವಾಗಿರಬಹುದೇನೋ

## ಛಂದಸ್ಸು[3]

ಈ ಶಾಸನಸಂಪುಟದಲ್ಲಿ ಸಂಗ್ರಹಿತವಾಗಿರುವ ಪ್ರತಿ ಶಾಸನದಲ್ಲೂ—ಅದು ಪದ್ಯಶಾಸನವಾಗಿರಲಿ ಅಥವಾ ಪದ್ಯಗದ್ಯಗಳು ಕೂಡಿ ಬರುವ ಶಾಸನವಾಗಿರಲಿ—ಕಂಡುಬರುವ ಪದ್ಯಗಳ ಛಂದಸ್ಸುಗಳನ್ನು ಗುರುತಿಸಿ ಆಯಾ ಶಾಸನದ ಅಡಿಟಿಪ್ಪಣಿಯಲ್ಲಿ ತೋರಿಸಿದೆ ಕನ್ನಡ ನಾಡಿನ ಶಾಸನ ಕವಿತ್ವದಲ್ಲಿ ಛಂದಸ್ಸು ವಹಿಸಿರುವ ಪಾತ್ರ ಯಾವ ರೀತಿಯದು, ಅಲ್ಲಿ ಯಾವ ಪ್ರಮಾಣ ದಲ್ಲಿ ಹೇಗೆ ವಿವಿಧ ಛಂದಸ್ಸುಗಳು ಹಂಚಿಕೆಯಾಗಿವೆ, ಅಂತಹ ಹಂಚಿಕೆಯಲ್ಲಿ ಕಂಡುಬರುವ ಕವಿಗಳ ವಿದ್ವತ್ತಿನ ದೃಷ್ಟಿ ಯಾವ ತೆರನಾದ್ದು ಈ ಮುಂತಾದುವನ್ನು ತಿಳಿಯುವುದಾದರೆ ಶಾಸನಗಳ ಸಾಹಿತ್ಯಿಕ ಮೌಲ್ಯವನ್ನು ಗುರುತಿಸುವ ಕೆಲಸ ಸ್ವಲ್ಪಮಟ್ಟಿಗೆ ಸುಲಭವಾಗುತ್ತದೆ ಎನ್ನುವುದೇ ಇದರ ಉದ್ದೇಶ ಅಲ್ಲದೆ ಕನ್ನಡ ಭಾಷೆಯ ರಚನೆಯ ಮೇಲೆ ಸಂಸ್ಕೃತ ಭಾಷೆ ಛಂದಸ್ಸುಗಳು ಉಂಟುಮಾಡಿರುವ ಪ್ರಭಾವವನ್ನೂ ಕನ್ನಡ ಛಂದಸ್ಸುಗಳ—ಎರವಲುಕೊಂಡ ಮತ್ತು ದೇಸೀಯವಾದ—ಐತಿಹಾಸಿಕ ಬೆಳೆವಣಿಗೆಯ ಮಜಲುಗಳನ್ನೂ ಗುರುತಿಸುವುದಕ್ಕೆ ಕೂಡ ಇದರಿಂದ ತುಂಬ ಅನುಕೂಲವಾಗುತ್ತದೆ ಸಂಸ್ಕೃತ ಕನ್ನಡ ಶಾಸನಗಳ ಛಂದೋ ವೈವಿಧ್ಯವನ್ನು ಸ್ವತಂತ್ರವಾಗಿಯೂ ತೌಲನಿಕವಾಗಿಯೂ ಅಧ್ಯಯನಮಾಡುವುದೂ ಫಲಕಾರಿಯಾದ್ದೇ ವಾಸ್ತವವಾಗಿ ಸಂಸ್ಕೃತ ಕನ್ನಡ ಭಾಷೆಗಳಲ್ಲಿ ಶಾಸನ ಛಂದಸ್ಸಿನ ಅಧ್ಯಯನವಿರಲಿ, ಛಂದಸ್ಸಿನ ವ್ಯಾಪಕವಾದ ಅಧ್ಯಯನವೇ ಇನ್ನೂ ನಡೆದಿಲ್ಲ ಭಾವವಾಹಿಯಾದ ಭಾಷೆ ನಿಯತಛಂದಸ್ಸಿನ ಚೌಕಟ್ಟಿನಲ್ಲಿ ಹೇಗೆ ಅಪೂರ್ವವಾಗಿ ಹೆಣೆದುಕೊಳ್ಳುತ್ತದೆ ಎನ್ನುವ ಕವಿಕಾರ್ಯ ರಹಸ್ಯದ ವಿಶ್ಲೇಷಣೆ ಎಷ್ಟು ಚೆನ್ನಾಗಿ ನಡೆದರೆ ಪ್ರಾಚೀನಕವಿತ್ವ ಅಷ್ಟು ಚೆನ್ನಾಗಿ ಅರ್ಥವಾಗುತ್ತದೆ ತೆಲುಗು ಭಾಷೆಯಲ್ಲಿ ಪ್ರಾಚೀನ ಮಹಾಕಾವ್ಯದ ಹಾಗೂ ಶಾಸನ ಸಾಹಿತ್ಯದ ಛಂದಸ್ಸಿನ ಅಭ್ಯಾಸ ಕೆಲಮಟ್ಟಿಗೆ ನಡೆದಿದೆ ಅಂಥ ಪ್ರಯತ್ನ ಕನ್ನಡ ಭಾಷೆಯಲ್ಲಿ ಕೂಡ ನಡೆಯುವುದಕ್ಕೆ ಹೇರಳವಾದ ಉಪಪತ್ತಿಯುಂಟು ಎನ್ನುವುದು ಈ ಸಂಪುಟ ಒಂದನ್ನು ನೋಡಿದರೂ ಸಾಕು, ಯಾರಿಗಾದರೂ ತಿಳಿಯುತ್ತದೆ

ಇಲ್ಲಿ ಪದ್ಯಗಳ ಛಂದಸ್ಸುಗಳನ್ನು ಗುರುತಿಸುವಾಗ ಅನುಸರಿಸಿರುವ ಕ್ರಮಗಳು ಈ ರೀತಿಯಾಗಿವೆ

೧ ಛಂದಸ್ಸುಗಳ ಹೆಸರುಗಳನ್ನು ಪ್ರೊ ಎಚ್ ಡಿ ವೇಲಣಕರ್ ಅವರು ಸಂಪಾದಿಸಿರುವ 'ಜಯದಾಮನ್'

---

[1] B R Gopal, *Karnatak Inscriptions*, Vol V, No 32, Introduction xxxvi

[2] ಪದ್ಮರಾಜ ಪಂಡಿತ ಚತುರ್ದಶನೋಂಪೀ ಕಥೆ (1929)

[3] ಈ ಭಾಗವನ್ನು ಪ್ರಾ ಟಿ ವಿ ವೆಂಕಟಾಚಲಶಾಸ್ತ್ರೀ ಮತ್ತು ಶ್ರೀ ಸೀತಾರಾಮ ಜಾಗಿರ್‌ದಾರ್ ಅವರುಗಳು ಒರದಿದ್ದಾರೆ

